# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಕರ್ನಾಟಕ ಸರ್ಕಾರ

ಸಂಪುಟ-2 ಸಂಚಿಕೆ-7 ದಿನಾಂಕ : 30.09.2018 ಕೊಡಗು ರೂ. 20/-

ಜುಲೈ-ಆಗಸ್ಟ್-ಸೆಪ್ಟೆಂಬರ್



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಪುತ್ತೂರ್‌ನ ತೆಂಕಿಲಲಿ ನಡ್ಡ ಆಟಿ ಹಬ್ಬಲಿ ಕುಪ್ಪಿಗೆ ನೀರ್ ತುಂಬುಸುವ ಸ್ಪರ್ಧೆ




ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬಲಿ ನಡ್ದ ಸಾಂಸ್ಕೃತಿಕ ಕಾರ್ಯಕ್ರಮ



12-8-18 ರಂದ್ ಸುಳ್ಯದ ನಾಲ್ಕೂರು ಗ್ರಾಮದ ಹಾಲೆಮಜಲುಲಿ ನಡ್ದ 'ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ'ದ ವೇದಿಕೆಲಿ ಗಣ್ಯರ್

# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ



ಪ್ರಧಾನ ಸಂಪಾದಕರ್

ಶ್ರೀ ಪಿ.ಸಿ. ಜಯರಾಮ

ಸಂಪಾದಕರ್

ಶ್ರೀ ಬಾರಿಯಂಡ ಜೋಯಪ್ಪ

ಪ್ರಕಾಶಕರ್

ಶ್ರೀ ಉಮರಬ್ಬ

# ಅಧ್ಯಕ್ಷರ ಮಾತ್

2018ರ ಜೂನ್ 24ರಂದ್ ಮಡಿಕೇರಿಲಿ ಸಾಹಿತ್ಯ ಶಿಬಿರ ಮತ್ತೆ ಸಂವಾದ ಕಾರ್ಯಕ್ರಮ ನಡ್ತ್. ಆ ಕಾರ್ಯಕ್ರಮನ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕೊಡವ ಸಾಹಿತ್ಯ ಅಕಾಡೆಮಿ ಮತ್ತೆ ಕೊಡಗು ಜಿಲ್ಲಾ ಲೇಖಕ ಮತ್ತು ಕಲಾವಿದರ ಬಳಗದ ವತಿಂದ ನಡ್ಸಲಾತ್. ಈ ತ್ರಿಕೂಟ ನಡ್ಸಿದ ಜಿಲ್ಲಾ ಮಟ್ಟದ ಕಾರ್ಯಕ್ರಮ ಯಶಸ್ವಿಯಾಗಿ ನಡ್ತ್. ಅದ್ ಆದ ಮೇಲೆ ಜುಲೈ 22 ರಂದ್ ಜಿಲ್ಲಾ ಮಟ್ಟದ 'ಆಟಿ ನಾಟಿ ಕೂಡುಕೂಟ ನಡ್ತ್. ಅದ್ ಮಡಿಕೇರಿ ತಾಲೂಕ್‌ನ ದೇವಸ್ತೂರು ಗ್ರಾಮಲಿ ವಿಜೃಂಭಣೆಂದ ನಡ್ಸಲಾತ್. ಆದರೆ ಕುಕ್ಕೆರ ಕುಟುಂಬದ ಆ ದೇವಸ್ತೂರು ಗದ್ದೆ ಮಹಾಮಳೆಂದಾಗಿ  ಇಂದ್ ಮನ್ನೊಳಗೆ ಉಟ್ಟಿಷ್ಟೆ.

29–7–2018 ರಂದ್ ಅರೆಭಾಷೆ ಲಿಪಿ, ವ್ಯಾಕರಣ ಮತ್ತು ಭಾಷಾ ಸಬಲೀಕರಣ, ಕೋಡಿ ಕುಶಾಲಪ್ಪಗೌಡರ ಕೊಡುಗೆ ಹಾಗೂ ಕೋಡಿಯವರ ಸಾಹಿತ್ಯ ಅವಲೋಕನತ್ತೇಳಿ ರಾಷ್ಟ್ರೀಯ ಅರೆಭಾಷೆ, ವಿಚಾರ ಸಂಕಿರಣ ಕಾರ್ಯಕ್ರಮ, ಸುಳ್ಯದ ಕೆ.ವಿ.ಜಿ. ಯವರ ಕಾನೂನು ಕಾಲೇಜ್ ಸಭಾಂಗಣಲಿ ನಡ್ಸಿದ್ ಒಂದ್ ದಾಖಲಾರ್ಹ ಕಾರ್ಯಕ್ರಮ ಆತ್. ಅದಾದ ಮೇಲೆ ಆಗಸ್ಟ್ 5 ರಂದ್ ಪುತ್ತೂರ್‌ನ ತೆಂಕಿಲ ಒಕ್ಕಲಿಗ ಗೌಡ ಸಮುದಾಯ ಭವನಲಿ ಆಟಿ ಹಬ್ಬ ನಡ್ಸಲಾತ್.

12–8–2018 ರಂದ್ ಸುಳ್ಯದ ನಾಲ್ಕೂರು ಗ್ರಾಮದ ಹಾಲೆಮಜಲು ವೆಂಕಟೇಶ್ವರ ಸಭಾಂಗಣಲಿ 'ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ' ಕಾರ್ಯಕ್ರಮ ನಡ್ತ್. 15–9–2018ರಂದ್ ಬೆಳ್ಳಾರೆನ ತೆಂಕುತಿಟ್ಟು ಯಕ್ಷಗಾನ ನಾಟ್ಯ ತರಬೇತಿ ಕಾರ್ಯಾಗಾರ ಉದ್ಘಾಟನೆ ಆಗಿ ಈಗ ಅಲ್ಲಿ ತರಬೇತಿ ಕಾರ್ಯಕ್ರಮ ನಡಿತಾ ಉಟ್ಟು.

ಅಕಾಡೆಮಿ ವತಿಂದ ಈಗ ಅರೆಭಾಷೆಯ ಕೆಲವು ಪುಸ್ತಕ ಮುದ್ರಣ ಆಗ್ತಾ ಉಟ್ಟು. ಫೆಲೋಶಿಪ್‌ಗಾಗಿ ಈಗಾಗಲೇ ಅರ್ಜಿ ಕರ್ದೊಳೊ.

ಕೊಡಗ್‌ಲಿ ಮಳೆಂದಾದ ದುರಂತದ ಪ್ರಯುಕ್ತ ಈ ನಡುವೆ ಯಾವ್ದೇ ಸಾಂಸ್ಕೃತಿಕ ಕಾರ್ಯಕ್ರಮಗಳ ನಡ್ಸ್‌ತ್‌ಲೆ. ಬೇರೆ ಬೇರೆ ಕಡೆ ಆದ ದುರಂತಕ್ಕೆ ಅಕಾಡೆಮಿ ವಿಷಾದ ವ್ಯಕ್ತ ಪಡಿಸಿದೆ.

✍ಪಿ.ಸಿ. ಜಯರಾಮ

# ಸಂಪಾದಕೀಯ

1960ರ ದಶಕಲಿ ಕೊಡಗ್‌ಲಿ ಆದ ಜಲಪ್ರಳಯದ ಬಗ್ಗೆ ಹಿರಿಯವ್ಕೆ ಗೊತ್ತುಟು. ಅದ್ ಆದ ಮೇಲೆ ಬರಗಾಲನೂ ಬಾತ್. ಬೆದ್ರಕ್ಕಿ ಅನ್ನ ಊಟ ಮಾಡ್ದರ ಮರೆಕಾದುಲೆ. ಇದೀಗ 2018ರ ಮಳೆಗಾಲನ ಮಹಾ ಮಳೆಗಾಲ, ಜಲಪ್ರಳಯತ್ತೆಲ್ಲಾ ಕರೆಕ್. ಈ ಮಳೆಂದಾದ ಕಷ್ಟ ನಷ್ಟ ಅಷ್ಟಿಷ್ಟಲ್ಲ. ಪ್ರಾಣ ಹಾನಿಯಾತ್. ಮನೆಮಾರ್, ಆಸ್ತಿಪಾಸ್ತಿ, ಉಡುಗೆ ತೊಡುಗೆನೆಲ್ಲಾ ಜನ ಕಳ್ಕಂಡೊ. ಉತ್ತರ ಕೊಡಗ್‌ನ ಹಲವು ಗ್ರಾಮಗಳ ಜನರ ಜೀವನ ನರಕ ಆಗುಟು. ಜನ್ರ ಬೊದ್ಕ್ ಹಾವು ಏಣಿ ಆಟದಂಗೆ ಆಗೋತು. ಈಗ ಆದ ದುರಂತ ಯುವಕರಿಗೆ ಸವಾಲಾಗುಟ್ಟು. ವಯಸ್ಸಾದ ಅಪ್ಪ ಅವ್ವ, ಕಾಯಿಲೆ ಬಿದ್ದವು, ಬಸುರಿ, ಬಾಣಂತಿ, ಕೈ ಕೂಸುಗ, ಎಳೆ ಮಕ್ಕ, ಇಸ್ಕೂಲ್ ಮಕ್ಕ, ಕೆಲ್ಸ ಹುಡ್ಕವು, ಮೊದುವೆ ಆಕೆ ಇರೊವು... ಹಿಂಗೆ ಸಮಸ್ಯೆಗಳ ಬೆಟ್ಟನೇ ಎದ್ರು ನಿತ್ತುಟು. ಕೊಡಗ್ ಮಾತ್ರ ಅಲ್ಲ, ನೆರೆ ಕರೆ ಜಿಲ್ಲೆಗ, ನೆರೆಕರೆ ರಾಜ್ಯಗಳ್ಲೂ ಕಷ್ಟ ನಷ್ಟ ಆಗ್ತಾ ಉಟ್ಟು. ತುಂಬಾ ಎಚ್ಚರಿಕೆ ತಾಳ್ಮೆ, ಸೂಕ್ಷ್ಮ ಮತ್ತೆ ಬುದ್ಧಿವಂತಿಕೆಂದ ಬೊದ್ಕ್ ನೀಸೋಕಾದೆ.

'ಹಿಂಗಾರ' ಸಂಚಿಕೆ ಆರರ ಮುಖಪುಟ 'ಆಟಿ, ನಾಟಿ ಕೂಡು ಕೂಟ' ನಡ್ಸಿದ ದೇವಸ್ತೂರ್‌ನ ಗದ್ದೆ ಬಯ್ಲ್‌ದ್ ಚಿತ್ರ. ಈಗ ಆ ಪೊರ್ಲು ಅಲ್ಲಿಲ್ಲೆ. ಅದರ ಈಗ ನೋಡಿರೆ ಕಣ್ಣೀರ್–ನಿಟ್ಟುಸ್ರು–ಅಷ್ಟೆ!

ಈ ಸತಿ 'ಶ್ರೀಮತಿ ಜಾನಕಿ ಕುರುಂಜಿ'ಯವರ ಬಗ್ಗೆ ಭವಾನಿಶಂಕರ ಅಡ್ತಲೆಯವು ಬರ್‍ದೊಳೊ. ಹಿಂಗಾರ ಏಳರ ಸಂಚಿಕೆದ್ ವಿಶೇಷತ್ತೇಳಿರೆ ವ್ಯಕ್ತಿ ಪರಿಚಯಂದ ಹಿಡ್ದ್ ಕತೆ, ಕವನ, ಲೇಖನಗ ಹೆಚ್ಚಿನದಾಗಿ ಹೆಣ್ಮಕ್ಕಳ ಬಗ್ಗೇ ಇರ್ದು. ಹೆಣ್ಮಕ್ಕಳ ಮತ್ತೆ ವೃದ್ಧರ ಬಗ್ಗೆ ಜನರ್‌ಲಿ ಈಗೀಗ ಹೆಚ್ಚ್‌ನ ಕಾಳಜಿ ವ್ಯಕ್ತ ಆಗ್ತಾ ಇರ್ದು ಒಳ್ಳ ಬೆಳವಣಿಗೆ. 'ಹಟ್ಟಿಲಿ ಹುಟ್ಟಿದ ದನ ಕರ್‌ಗ ಹಟ್ಟಿಲೇ ಅಂತ್ಯ ಕಾಣಲಿ. ವಯಸ್ಸಾತ್‌ತ ಮಾರ್‍ದುಲೆ'ತ್ತೇಳುವ ಮನಃಸ್ಥಿತಿಲಿ ಇರಕನ ವಯಸ್ಸಾದವ್ಕೆ ಆಶ್ರಮದ ಕಡೆ ದಾರಿ ತೋರ್‍ಸುದು ಎಷ್ಟ್ ಸರಿ? ಹಂಗೆತ್ತೇಳಿ 'ಮನೆಲೇ ಬಿದ್ದಿರ್, ಬೇಕರೆ ಮುಕ್ಕುತ' ಹೇಳಿಕಂಡ್ ಹೆಟ್ಟಿ ಕುಟ್ಟಿ ಸಾಂಕುದು ಧರ್ಮ ಅಲ್ಲ. 'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ'ತ ಹಿರಿಯರ ಮಾತ್‌ನ ಮರೆಕಾಗದ್.

'ಚಿತ್ರಕ್ಕೆ ಪದ್ಯದ ಮೆರಗು ಕೊಡಿ'ತ್ತೇಳಿ ಹೊಸ ಒಂದ್ ಪುಟ ಉಟ್ಟು. ಹಿಂಗಾರ ತಡ ಆಗಿ ಕೈ ಸೇರ್‍ದ ಕಾರಣಂದತ ಕಂಡದೆ. ಒಂದು ಪದ್ಯ ಮಾತ್ರ ಕೈ ಸೇರಿಟು. ಇನ್ನಾರೂ ಕಳ್ಸಿ. ಎಂಟರ ಸಂಚಿಕೆಗೆ ಆದೆ. ಸಕಾಲಲಿ ಸಾಹಿತ್ಯ ಒದಗಿಸಿ ಕೊಟ್ಟ ನಿಮಿಗೆಲ್ಲವ್ಕೂ ಧನ್ಯವಾದಗ.

✍ಬಾರಿಯಂಡ ಜೋಯಪ್ಪ.

# ಹಿಂಗಾರ ಒಡ್ಸಕನ

# ಪ್ರಾರ್ಥನೆ

ಗಿರಿಸುತೆನ ಕಂದನ ನೆನೆದೊಮ್ಮೆ ಪ್ರಥಮಲಿ
ಗರಳ ಪ್ರಾಶವ ಗೈದ ಪರಶಿವನ ಪಾದಲಿ
ಅಂಬೆಯ ಅನುಗ್ರಹಕೆ ತಲೆಬಾಗಿ ಕೈ ಮುಗ್ದ್
ಬೇಡುತ ವರಗಳ ಜಗದೊದ್ದಾರ
ಮಾಡೆಂದ್ ಸುರುಗೆ ಬೇಡುವೆ ನಿನ್ನ ॥ ೧ ॥

ಜನನಿಯೇ ನೀನಿಂದ್ ಜಗದಿ ನಡೆವ ತಮಕೆ
ಸದ್ಬುದ್ಧಿಗಳ ನೀಡಿ ನಡ್ಸೊಕು ನಮ್ಮವ್ವ
ಮಸಣಕ್ಕೆಳೆವರನೆಲ್ಲ ನಿಲ್ಸಿ ಕಾಪಾಡ್
ಒಳಿತಿನೆಡೆಗೆ ಸೆಳೆಕು ಓ ಮಾತೆ ಜಗದಂಬೆ
ನಿನ್ನಲಿ ನಿಂತ್ ನಾ ಬೇಡುದು ಒಂದೇ ॥ ೨ ॥

✍ಮಾಲಗೌಡ

ವ್ಯಕ್ತಿ ಪರಿಚಯ



# ಶ್ರೀಮತಿ ಜಾನಕಿ ಕುರುಂಜಿ

ಗ್ರಾಮೀಣ ಭಾರತನ ಸದೃಢ ಸ್ವಾವಲಂಬಿ ಮಾಡುವ ಮಹಾತ್ಮಾ ಗಾಂಧೀಜಿನ ಕನಸ್ ಇಡೀ ದೇಶಕ್ಕಾದರೆ, ಸುತ್ತಮುತ್ತ ಕಾಡ್-ಗುಡ್ಡೆಗಳ್‌ಂದ ಆವರಿಸಿದ ಸುಳ್ಯನ ಸದೃಢ ಸ್ವಾವಲಂಬಿ ಮಾಡುವ ಕನಸ್ ಕಂಡೊವು ಅಮರ ಸುಳ್ಯದ ಶಿಲ್ಪಿ ಡಾ. ಶ್ರೀ ಕುರುಂಜಿ ವೆಂಕಟ್ರಮಣ ಗೌಡ್ರು. ಸುಳ್ಯದ ಕುರುಂಜಿ ಗುಡ್ಡೆನ ವಿದ್ಯೆ ಕೊಡುವ ಕಾಶಿನಂಗೆ ಮಾಡಿ, ಇಡೀ ಪ್ರಪಂಚದ ನಕ್ಷೆಲಿ ಸುಳ್ಯದ ಕುರುಂಜಿ ಬಾಗ್‌ಂತ ಗುರುತ್ ಮಾಡುವಂಗೆ ಮಾಡ್ದರ್‌ಂದ ಅವರ ಇಂದ್ 'ಶಿಕ್ಷಣ ಬ್ರಹ್ಮ'ಂತ ಈ ಭಾಗದ ಜನ ಕರ್ದವೆ. ಇವುಕೆ ಎರಡ್ ಶಕ್ತಿಗೆ ಪ್ರೇರಣೆಯಾಗಿ ನಿಂತ್ತೊವು. ಒಂದನೆಯದಾಗಿ, ಅವು ಮಣ್ಣ್‌ಲಿ ದುಡ್ದು ಹೊನ್ನ್‌ನ ಬೆಳ್ದಾಂಗೆ ಬೆಳ್ಸಿದ ಮೂಲ ಕೃಷಿ. ಎರಡನೆದಾಗಿ, ಅವರ ಕೈ ಹಿಡ್ದ ಹೆಣ್ಣ್ ಶ್ರೀಮತಿ ಜಾನಕಿಯವು. ಈಗ ಇಲ್ಲಿ ನಾ ನೆನ್ಸಿಕಾಂಕೆ ಹೊರ್ಟದ್ ಹೆಣ್ಣಿಗೇ ಮಾಧರಿ ಅನ್ಸುವ, ಬಾರೀ ನಿರಾಡಂಬರವಾಗಿದ್ದ, ಎಲ್ಲ ಸದ್ಗುಣಗಳ ತನ್ನೊಟ್ಟಿಗೆ ಬೆಳ್ಸಿಕಂಡಿದ್ದ ನಾವ್ಗೆಲ್ಲಾ (ಕೆ.ವಿ.ಜಿ.ಲಿ ಕೆಲ್ಸ ಮಾಡ್ತಿದ್ದೊವ್ಕೆ) 'ಅವ್ವ'ನಂಗಿದ್ದ ಒಬ್ಬ 'ಮಹಾತಾಯಿ' ಶ್ರೀಮತಿ ಜಾನಕಿ ವೆಂಕಟ್ರಮಣ ಗೌಡರ್.

2012 ಆಗಸ್ಟ್ ತಿಂಗಳ 22ನೇ ತಾರೀಖಿಗೆ ಇಂತ ಒಬ್ಬ ದೊಡ್ಡ ಅವ್ವನ ನಾವು ಕಳ್ಕಂಡ ದಿನ! ಆಗೋಸ್ಟ್ 22ಕ್ಕೆ ಲೆಕ್ಕ ಹಾಕಿರೆ 6 ವರ್ಷ ಆತ್. ಹಾಂಗಾಗಿ ಅವರ ನೆಂಪುನ ನಮ್ಮವರೊಟ್ಟಿಗೆ ಹಂಚಿಕಣೊಕೂಂತ ಆಸೆ ಆಗಿ ಈ ಬಹರ ಬರೆತಾ ಒಳೆ.

ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್(ರಿ)ನ ಸ್ಥಾಪಕರ್ ಆದ ಪೂಜ್ಯ ಕುರುಂಜಿ ವೆಂಕಟ್ರಮಣ ಗೌಡ್ರ ಹೆಣ್ಣಾಗಿ, ಇವು ಕೂಡಾ ಸ್ಥಾಪಕ ನಿರ್ದೇಶಕ ಆಗಿ ಬಾರೀ ವರ್ಷ ಕೆಲ್ಸ ಮಾಡ್ದೊವು. ಗೌಡ್ರ ಕಷ್ಟ ಸುಖಗಳ್ಳಿ ಸರಿಗಟ್ಟಿಯಾಗಿ ಹೆಗ್‌ಲ್‌ಗೆ ಹೆಗಲ್ ಕೊಟ್ಟು, ತೆರೆ ಮರೆಲಿ ದುಡ್ದೊವು. ಶಿಕ್ಷಣ ಸಂಸ್ಥೆಗ ಬೆಳೀತಾ

ಇದ್ದಾಂಗೆ ಇವರ ಜವಾಬ್ದಾರಿಗೆಲ್ಲಾ ಹೆಚ್ಚ್‌ತಾ ಹೋತ್. ಕೊನೆಗೆ ಇಡೀ ಕೃಷಿ ಕೆಲ್ಸನ ನೋಡಿಕಾಂಬ ಜವಾಬ್ದಾರಿ ಇವರ ಒಬ್ಬನ ತಲೆಮೇಲೆ ಬಿದ್ದಾಂಗಿತ್ತ್. ಆದರೂ ಮನೆಲಿ ಅಡ್ಗೆ ಕೆಲ್ಸ ಅವೇ ಮಾಡಿಕಂಡ್ ಗಂಡ-ಮಕ್ಕಳಿಗೆ ತಿನ್ಸುತ್ತಿದ್ದೊಂತೇಳಿರೆ ಯಾರೂ ನಂಬಿಕ್ಕಿಲೆ. ಅಡಿಗೆ ರುಚಿ, ಅವರ ಪಾಕ ತಿಂದವಂಗೇ ಗೊತ್ತು. ಮಾಂಸದ ಅಡ್ಗೆಲಿ ಅದರ್‍ಲೂ ಕೊಡ್ಗುನ ಸ್ಟೈಲ್‌ಲಿ ಹಂದಿ ಗೈಪು ಮಾಡ್ದರ್‍ಲಿ ಅವರ್ದ್ ಎತ್ತಿದ ಕೈ.

ಇವು ಮೂಲತಃ ಕೊಡಗ್‌ನ ಮಡಿಕೇರಿ ತಾಲೂಕ್‌ನ ಮರುಗೋಡಿನ ಪರ್ಚನ ಮನೆಯೊವು. 20.06.1931ರ್‍ಲಿ ಇವು ಹುಟ್ಟಿದ್. ಇವು ಬಾರೀ ಸರಳತೆಲಿ ಬದ್ಕಿದವು. ಡಾ. ಕುರುಂಜಿ ವೆಂಕಟ್ರಮಣ ಗೌಡರ ಹೆಣ್ಣ್ ಇವು ಆದರೂ, ಹೀಂಗೆ ನೋಡಿರೆ ಅಂದರೆ ಅವರ ಉಡುಗೆ-ತೊಡುಗೆ, ಎಲ್ಲವರೊಟ್ಟಿಗೆ ಬೆರೆವ, ಮಾತಾಡುವ ರೀತಿಂದ, ಯಾರೂ ಅವು ಕೆ.ವಿ.ಜಿಯವರ ಹೆಣ್ಣೊಂತೆಳಿ ಕಲ್ಪನೆಲೇ ಇತ್ತ್‌ಲೆ. ಕಾರಣ ಅವರ್‍ಲಿ ದೊಡ್ಡಸ್ಥಿಕೆಂತೇಳಿರೆ ಅವ್ಕನೇ ಗೊತ್ತಿಲೆ. 'ಹೆಣ್ಣ್ ಸಮಾಜದ ಕಣ್ಣ್'ಂತ ಹೇಳುವ ಗಾದೆಗೆ ಇವರ್‌ಂದ ಒಳ್ಳೆ ಉದಾಹರಣೆ ಬೇರೆ ಸಿಕ್ಕಿಕಿಲೆ. 'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ತೇಳುವಾಂಗೆ ಇವು ಕೊಡ್‌ಗ್‌ಲಿ ಹುಟ್ಟಿರೂ, ಸಪ್ತಪದಿ ತುಳ್ದು ಸಂಸಾರಕ್ಕೆ ಕಾಲಿಸಿದ ಕುರುಂಜಿ ಮನೆತನನ ಏಳಿಗೆಗೆ ಇಡೀ ತನ್ನ ಜೀವನನೇ ದಾರೆ ಎರ್‍ದೊವು. ಕೃಷಿನ ಆಧಾರಲೇ ವಿದ್ಯಾದೇಗುಲಗಳ ಕಟ್ಟಿಕೆ ಹೊರ್‍ಟ ಗಂಡನ ಕ್ರಾಂತಿಕಾರಿ ಸಾಧನೆಗೆ, ಇವು ಆಧಾರ ಸ್ತಂಭವಾಗಿದ್ದೊವು. ದಾಂಪತ್ಯಲಿ ಕೆ.ವಿ.ಜಿಯೊವು ಸ್ವತಃ ಹೇಳಿಕಂದಾಂಗೆ '63' ಅಂಕೆನಾಂಗೆ ಗುರುತಿಸಿಕಂಡ್ ಪ್ರೀತಿ-ಪ್ರೇಮಗಳ ಪ್ರತಿರೂಪದಾಂಗೆ ಆದರ್ಶ ಜೀವನ ನಡ್ಸಿದವು. ದಿನದ 24 ಗಂಟೆಗಳ್ಲಿ ಕೂಡಾ ಈ ಎಲ್ಲಾ ಶಿಕ್ಷಣ ಸಂಸ್ಥೆಗಳ ಬಗ್ಗೆ ತನ್ನ ಮಕ್ಕಳಾಂಗೆ ಪಾಲನೆ ಪೋಷಣೆ ಮಾಡಿಕಂಡ್, ಯಾಗೊಳು ಏನಾರ್ ತಲೆಬಿಸಿ ಆಕನ ಚಿಂತೆ ಮಾಡಿಕಂಡ್, ಯೋಚನೆ ಮಾಡಿಕಂಡ್ ಕೆ.ವಿ.ಜಿಯವ್ ಕುದ್ದಿರ್‌ಕನ ಎಷ್ಟೋ ಸರ್ತಿ ತನ್ನ ಗಂಡಂಗೆ ಏನಾರ್ ಸಮಾದಾನ ಹೇಳಿ, ಐಡಿಯಗಳ ಕೊಟ್ಟ್ ನಾಲ್ಕ್ ಅತ್ತಂದ ಬೈಗಳ್ ತಿಂದ್‌ಕಂಡ್ ಎಲ್ಲ ಸರಿ ಹೋಗುವಾಂಗೆ ಮಾಡ್ತಿದ್ದೊವು. ಈ ಸಹನಾ ಮೂರ್ತಿ ಅವ್ವ ತನ್ನ ಎರ್‍ಡ್ ಕಣ್ಣ್‌ಗಳಿದ್ದಾಂಗೆ ಇದ್ದ ಗಂಡ್ ಮಕ್ಕ, ಡಾ. ಕೆ.ವಿ. ಚಿದಾನಂದ ಮತ್ತೆ ಡಾ. ರೇಣುಕಾಪ್ರಸಾದ್ ಕೆ.ವಿ.

ಮತ್ತು ಅವರ ಒಬ್ಬೆ ಮಗಳಾದ ಶ್ರೀಮತಿ ವರ್ಧಿನಿ ಜಯಕುಮಾರ್‌ನ ಅವರ ಜೀವನದ ಉಸಿರಿನಾಂಗೆ ಸಾಕಿ ಸಲಹಿದವು. ಇಡೀ ಕೆ.ವಿ.ಜಿ ಶಿಕ್ಷಣ ಸಂಸ್ಥೆಗಳ್ಲಿ ದುಡಿಮೆ ಮಾಡ್‌ತಿದ್ದವರ ಕೆಲ್ಸದವರಾಂಗೆ ಕಾಣದೆ, ಅವರ ಕುಟುಂಬ ಸಂಸಾರದವರಾಂಗೆ ಕರ್ದ್ ಮಾತಾಡ್ಸಿ, ಕುಡ್ಯೆಕೆ, ತಿಂಬಕೆ ಕೊಟ್ಟು ಕಳ್ಸ್‌ತ್ತಿದ್ದೊ. ಕಷ್ಟ-ಸುಖ ಹೇಳಿಕಂಡ್ ಅವರ ಹಕ್ಕಲೆ ಹೋದವುಕೆ ಬಾರೀ ಕರುಣೆಂದ ಕಂಡ್, ಕುದ್ದ್‌ರ್ಸಿ ಸಮದಾನ ಹೇಳಿ ಕಳ್ಸುತ್ತಿದ್ದೊ. ಹಾಂಗೇ ಕಳ್ಸದೆ ಅವರ ಕೈಲಾದ ಸಹಕಾರನ ಮಾಡ್ತಿದ್ದೊ. ಸುಳ್ಯ ತಾಲೂಕು ಮಾತ್ರ ಅಲ್ಲ ಕೊಡಗು ಮತ್ತು ಬೆಂಗಳೂರ್‍ಲಿ ಕೂಡಾ ಶಾಲೆ, ಕಾಲೇಜ್‌ಗಳ ಕಟ್ಟಿ, ಇಡೀ ದೇಸಲಿ ಹೆಸ್ರ್‌ಪಡ್ದ್, ಅದೆಷ್ಟೋ ಪ್ರಶಸ್ತಿಗಳ ಪಡ್ದ ಕುರುಂಜಿ ವೆಂಕಟ್ರಮಣ ಗೌಡರ ಧರ್ಮಪತ್ನಿ ಆದರೂ ಅವರ್‍ಲಿ ಯಾವುದೇ ಅಹಂಕಾರ ಆಗ್ಲಿ ಶ್ರೀಮಂತಿಕೆನ ಯಾವ ಗುಣಗ ಆಗಲಿ ಕಾಂಬೊತ್ತಿತ್ತಿಲೆ. ಒಬ್ಬ ಸಾಮಾನ್ಯ ಹೆಂಗ್‌ಸ್‌ನ ಹಾಂಗೆ ಮನೆ ಮತ್ತೆ ತನ್ನ ಕುಟುಂಬನ ನೋಡಿಕೊಂಬೋದೇ ನನ್ನ ಕೆಲ್ಸ ಅಂತ ತಿಳ್ಕಂಡ್ ಜೀವನ ಚಕ್ರಲಿ ಅವ್ಕೆ ಬಂದ ಕಷ್ಟ-ಸುಖಗಳ ಒಂದೇ ದೃಷ್ಟಿಲಿ ಸ್ವೀಕಾರ ಮಾಡಿಕಂಡ್ ಬದ್ಕಿದೊವು. ರಾಮಾಯಣದ ಸೀತೆನಾಂಗೆ ಎಲ್ಲನ ಮನ್ಸ್‌ಲೇ ಕರ್‍ಗಿಸಿಕಂಡ್ ದೇವರ ಮೇಲೆ ಪ್ರೀತಿಂದ, ಭಕ್ತಿಂದ ಇದ್ದ್‌ಕಂಡ್, ನಮ್ಮ ಸಮುದಾಯದೊವುಕೆ ಸಂಸ್ಕಾರನ ಬೆಳ್ಸಿಕೆ ದಾರಿ ತೋರ್‍ಸಿದೊವು. ಬೊಳ್ಪುನ ಸೂರ್ಯನಾಂಗೆ ಸಮಾಜಕ್ಕೆ ತಂಪುನ ಗಾಳಿ ಬೀಸುವಾಂಗೆ ಮಾಡಿ ಬದ್‌ಕಿದೊವು. ಕೃಷಿ ಕೆಲ್ಸಲಿ, ಮನೆನ ಅಚ್ಚುಕಟ್ಟುತನಲಿ, ಪ್ರೀತಿ ವಾತ್ಸಲ್ಯಲಿ, ಬಂದುಗಳೊಟ್ಟಿಗೆ ಬೆರೆದರ್‍ಲಿ, ಭಾಗೀರಥಿನಾಂಗೆ ಸ್ಫೂರ್ತಿ ಕೊಟ್ಟವು. ಕೆ.ವಿ.ಜಿಯೊವುಕೆ ಸಿಕ್ಕಿದ ಗೌರವ, ಸನ್ಮಾನ, ಪ್ರಶಸ್ತಿ-ಪುರಸ್ಕಾರಗಳ್ಲಿ ಅವರೊಟ್ಟಿಗೆ ಇವುನೂ ಇದ್ದ್, ಅವರ ವರ್ಚಸ್ಸ್‌ನ ಹೆಚ್ಚಿಸಿದೊವು. ಎಲ್ಲವರಾಂಗೆ ತಾನೂ ದುಡ್ದ್ 'ಕಾಯಕವೇ ಕೈಲಾಸ'ಂತೇಳುವ ಕರ್ಮಯೋಗನ ತಕ್ಕಂಡ್, ತನ್ನ ಜೀವನಲಿ ಸಾರ್ಥಕತೆನ ಪಡ್ಕೊಂಡೊವು. ಮಣ್ಣ್‌ಲ್ ದುಡ್ದ್ ಚಿನ್ನನ ಬೆಳ್ಸಿ, ಕೃಷಿಲಿ ಎತ್ತಿದ ಕೈ ಅಂತ ಹೊಗಳ್ಸಿಕೊಂಡೊವು. ವಿನಯತೆ, ಸೌಜನ್ಯಗಳ ಗಣಿಯಾಗಿ, ಯಾಗೊಳು ಪಾದರಸದಾಂಗೆ ಚಿಮ್ಮುತ್ತಿದ್ದ ಅವ್ವ ಯಾಗೊಳು ಖುಷಿಯಾಗಿ ಒಂದು ದೊಡ್ಡ ಸಾಧನೆನ ಮಾಡ್ದ ನಕ್ಷತ್ರದಾಂಗೆ ಬೆಳಗಿದೊವು. ಯಾವುದೇ ಆಡಂಬರಕ್ಕೆ ಹೋಗದೆ, ದುಂದು ವೆಚ್ಚ ಮಾಡದೆ,

ಚಿನ್ನ ಬಟ್ಟೆಂತ ಬಡಾಯಿಗಳಿಗೆ ಬಲಿ ಆಗದೆ, ಬದ್ಕ್‌ನ ಅನುಭವಿಸಿಕೆ ಬೇಕಾದರ ಮಾತ್ರ ಬಳ್ಸಿಕಂಡ್ ನಂಗೆನೂ ಬೇಡ, ನಾ ಇರ್ದು ಪರರ ಸುಖಕ್ಕೆಂತ ಸಂಕಲ್ಪ ಮಾಡಿಕಂಡೊವು. 'ಕಬ್ಬು ತುಂಡುನಾಂಗೆ' ತನ್ನತನನ ಮರ್ತ್, ತನ್ನ ಕುಟುಂಬಕ್ಕೆ ಸಂಸಾರಕ್ಕೆ, ಬಂದುಗಳಿಗೆ, ಸಮಾಜಕ್ಕೆ ಸಿಹಿಕೊಟ್ಟ ಬಾರೀ ದೊಡ್ಡ ತ್ಯಾಗಿ ಅವ್ವ ಇವು. ಸಿರಿಗಂಧ ತನ್ನ ಸವೆದು ಬೇರೆವುಕೆ ಪರಿಮಳ ಕೊಟ್ಟಾಂಗೆ, ದೀಪ ತಾನ್ ಹೊತ್ತಿಕಂಡ್ ಬೇರೆವುಕೆ ಬೊಳ್ಪು ಕೊಟ್ಟಾಂಗೆ, ಇವರ ಹೊಗಳಿಕೆ ಕೆಲವು ಶಬ್ದಗಳ್‌ಂದ ಸಾದ್ಯ ಇಲ್ಲೆ ಅಂತ ನನ್ನ ಅನ್ಸಿಕೆ.

ಇವು ಬದ್‌ಕಿದ ರೀತಿ, ಇವರ ಸರಳತೆ, ಇವರ ಪ್ರೀತಿ ವಾತ್ಸಲ್ಯ, ಇವರ ಶ್ರಮ, ಇದೆಲ್ಲವೂ ನಮ್ಮ ಬಾಳಿಗೆ ದಾರಿ ದೀಪ. ಹೇಂಗೆ ಕೆ.ವಿ.ಜಿಯೊವು ಈ ಸವಾಜಕ್ಕೆ ಈ ದೇಶಕ್ಕೆ ಒಬ್ಬ ಆದರ್ಶ ಪುರುಷ ಆಗಿ ನಾವ್ಗೆಲ್ಲಾ ಅನ್ನದಾತರಾಗಿದ್ದೊನೊ, ಹಾಂಗೆ ಈ ಅವ್ವ ಕೂಡಾ ನಾವ್ಗೆ, ನಮ್ಮ ಉಸಿರು ಇರ್‌ಕನ ಮುಟ್ಟ ನೆನಪಾಗಿ ಉಳ್ದವೆ. ಅವು ಹಾಕಿದ ಅನ್ನದ ಋಣ ನಮ್ಮ ಯಾಗೊಳು ನೆನ್ಸುವಾಂಗೆ ಮಾಡ್ದೆ. ಅವು ಈಗ ನಮ್ಮೊಟ್ಟಿಗೆ ಇಲ್ಲದಿದ್ದರೂ ಅವರ ನೆಂಪು ಮಾತ್ರ ಯಾಗೊಳು ಇದ್ದದೆ. ಅವರ ಬೆವುರ್‌ನ ಹನಿ ಹನಿಗಳೂ ನಮ್ಮಂತವರ ಬದ್ಕಿಗೆ ಹನಿ ಉಸಿರಾಗಿ ಉಳ್ದದೇಂತ, ಅವ್ವಂಗೆ ನನ್ನ ತಲೆಬಾಗಿದ ವಂದನೆಗ.

✍ಭವಾನಿಶಂಕರ ಅಡ್ತಲೆ
ಮೊ : 9448818181

(ಕತಾ ಜೊಂಪೆ)

# "ಪುನರ್ಜನ್ಮ"

ಈಗ ಸೋಂಪಣ್ಣ ದೊಡ್ಡ ಮೊನ್ಸ. ಎಲ್ಲಿ ಬ್ರಹ್ಮಕಲಶ ಆಗಲಿ, ಭೂತದ ಕೋಲ ನಡೆಯಲಿ, ಅಲ್ಲಿ ಸೋಂಪಣ್ಣ ಎದರ್ ಕುರ್ಸಿಲಿ ಕುದ್ದ್, ಅಲ್ಲಿನ ಉಸ್ತುವಾರಿ ನೋಡಿಕಂದು ಅವರ ಅಭ್ಯಾಸ. ಹಿಂಗೇತ ಹೇಳಿ ಸೋಂಪಣ್ಣನ ಹಳೇ ಕತೆ ನೆನ್ಸಿರೆ, ಅವ್ ಈ ವರೆಗೆ ಬದ್ಕಿರ್ದೇ ದೊಡ್ಡ ಸಂಗತಿ. ಆ ಮಾದರಿ ಕುಡ್ಯೊತ್ತಿದ್ದೊ. ಮತ್ತೆ ಹೇಂಗೆ ಹಿಂಗಾದೋ....? ಅದೊಂದು ದೊಡ್ಡ ಕತೆ...

ಸೋಂಪಣ್ಣಂಗೆ ಮೂರು ಜನ ಹೆಣ್ಮಕ್ಕ. ಒಂದು ಅಂಗನವಾಡಿ, ಮತ್ತೊಂದು ಎರಡನೇ ಕ್ಲಾಸ್, ದೊಡ್ಡವ್ಳ್ ನಾಲ್ಕನೇ ಕ್ಲಾಸ್. ಒಂದ್ ಗಂಡ್ ಕೂಸಾರ್ ಇರ್ಲಿಂತ ಹೇಳಿ ಮೂರ್ನೆಕೂಸುನ ಬಗ್ಗೆ ಆಲೋಚನೆ ಮಾಡಿದ್ದೊ. ಅವುಕ್ಕೆ ಅದರ ಯೋಗ ಇಲ್ಲೇಂತ ಕಾಣೊಕು. ದುಡ್ದ್ ತಿಂಬ ಅವ್ಕೆ ಆಗಲೇ ಮಂಡೆಬೆಚ್ಚ ಸುರು ಆಗಿತ್. ಅದರೊಟ್ಟಿಗೆ ಹೆಣ್ಣ್ ಶಾರದಕ್ಕಂಗೆ ಉಬ್ಬಸ ಕಾಯ್ಲೆ ಬೇರೆ. ಮನೇಲೇ ಇದ್ಕಂಡ್ ಬೀಡಿ ಕಟ್ಟುದು ಅವರ ಕೆಲಸ. ಮೊದ್ವೆಗೆ ಮುಂದೆನೇ ಕುಡೆವ ಚಟನ ಅಂಟ್ಸಿಕಂಡಿದ್ದ ಸೋಂಪಣ್ಣಂಗೆ ತೋಟಲಿ ಅಡಿಕೆ ತೆಗೆದು, ಮೊದ್ದು ಬುಡುದು, ಇವರ ದಿನ ಕೂಲಿ ಕೆಲ್ಸ. ಒಳ್ಳೇ ಸಂಬಳ ಸಿಕ್ತಿತ್. ಕೆಲ್ಸ ಮುಗ್ಸಿ ಮನೆಗೆ ಹೋಕನ, ಮೈ ಕೈ ಬೇನೆಂತ ಹೇಳಿ ದಿನಾ ಗಡಂಗ್ಗೆ ಹೋಗ್ತಿದ್ದೊ. ಅಲ್ಲಿಂದ ಹೊರಡ್ಕನ ಸಿಕ್ಕಿದ ಸಂಬಳ ಮುಗ್ದ್, ಮತ್ತೆ ಸಾಲ ಮಾಡಿಯೇ ಹೊರಡ್ತಿದ್ದೊ. ಮಕ್ಕಳ ಓದಿಗೆ, ಬಟ್ಟೆಗೆ, ಉಂಬಕ್ಕೆ ಇವ್ ಇಬ್ಬೊರು ಗೈಯವ ದುಡ್ಡು ಎಲ್ಲಿಗೂ ಸಾಕಾಗದೆ, ಊರಿಡೀ ಕೆಲಸಕ್ಕೆ ಬನ್ನೆಂತ ಹೇಳಿ, ಧನಿಗಳಲ್ಲಿ ತಲೆಂದ ಮೇಲೆ ಸಾಲ ಮಾಡಿದ್ದೊ.

ಒಂದು ಮಳ್ಗಾಲ. ಮೊದ್ದು ಬುಡುವ ಹೊತ್ತು. ಹತ್ತ್ ಕಡೆಲಿ ಒಪ್ಪಿಕಂಡ್ ಆವುಟು. ಆದರೆ ಹಿಡ್ದ ಮಳೆ ಎರಡ್ ತಿಂಗಂದ ಬರ್ತಾನೇ ಇತ್ತ್. ಹಂಗಾಗಿ ಸೋಂಪಣ್ಣಂಗೆ ಕೆಲ್ಸ ಇಲ್ಲೆ. ಬೇರೆ ಕೆಲ್ಸಕ್ಕೆ ಹೋಕೆ ಗೊತ್ತಿಲ್ಲೆ. ದನಿಗಳೊಟ್ಟಿಗೆ ಸಾಲ ಕೇಳಿ ಕೇಳಿ, ಈಗ ಯಾರೂ ಒಂದು ರೂಪಾಯಿ ಸಾಲ ಕೊಡೊವು ಇಲ್ಲೆ. ದುಡ್ಡಿಲ್ಲದೇ ಗಡಂಗ್ ಮೆಟ್ಕಲ್ ಹತ್ವಂಗೆ ಇಲ್ಲೆ. ಏನ್ ಮಾಡಿಕೆ ಗೊತ್ತಾಗದೇ ಹಿಂಬೊತ್ನ ಹೊತ್ತಿಗೆ ಅವು ತಲೆಬಿಸಿಲಿ ಮನೆಕಡೆ ಹೊರ್ಟೊ. ಸೋಂಪಣ್ಣ ಮನೆಗೆ ಎತ್ತ್‌ಕನ ಮಕ್ಕ ಶಾಲೆಂದ ಬಂದ್ ಶಾಲೆ ಕೆಲ್ಸ ಮಾಡ್ತಾ ಒಳೊ.

ಶಾರದಕ್ಕ ಬೀಡಿ ಕಟ್ಟುತಾ ಇದ್ದೊ. ಸೋಂಪಣ್ಣನ ನೋಡಿ, ಮೆಲ್ಲಂಗೆ ಒಳಗೆ ಕರ್ದ್ "ಕತ್ತಲೆಗೆ ಉಂಬಕೆ ಅಕ್ಕಿ ಇಲ್ಲೆ, ಹೋಗಿ ಅಂಗ್ಡಿಂದ ಅಕ್ಕಿ ತನ್ನಿ". ಅಂತ ಹೇಳ್ದೊ. ಅದ್ಕೆ ಸೋಂಪಣ್ಣ "ನನಕಲೆ ನಯಾಪೈಸೆನೂ ಇಲ್ಲೆಮಾರಾಯ್ತಿ, ಕೆಲ್ಸನೂ ಇಲ್ಲೆ, ಸಾಲ ಕೇಳಿರೆ ಕೊಡೊವ್ ಯಾರಿಲ್ಲೆ, ನಾ ಎಂಥ ಸಾಯೊದು", ಗಂಡನ ಮಾತ್ಕೇಳಿ ಶಾರದಕ್ಕ ಸಿಟ್ಟ್‌ಲಿ ಅಡ್ಗೆ ಕೋಣೆಗೆ ಹೋಗಿ, ಮರ್ದಿನ ಆಸ್ಪತ್ರೆ ಮೊದ್ದಿಗೇಂತ ಸಾಸ್ವೆ ಡಬ್ಬಿಲಿ ತೆಗ್ದಿಸಿದ ನೂರ್ ರೂಪಾಯಿನ ತಂದ್ ಗಂಡನ ಕೈಲಿ ಕುಕ್ಕಿದೊ.

ದುಡ್ಡ್ ಕೈಗೆ ಸಿಕ್ಕಿದ್ದ್ ಒಂದೇ ಗೊತ್ತು.., ತಕಾ, ಸೋಂಪಣ್ಣ ಅಕ್ಕಿ ತಾಕೇಂತ ಅಂಗಡಿ ಕಡೆಗೆ ಹೊರಟೇ ಬುಟ್ಟೋ. ಅಂಗಡಿಗೆ ಕಾಡ್ ದಾರೀಲಿ ಒಂದು ಮೈಲ್ ನಡಿಯೊಕು. ಜಿರಿ ಜಿರಿಂತ ಮಳೆ ಬೇರೆ. ಕಾಡ್ ದಾರೀಲಿ ಹೋಕನ ಕೈಲಿ ಕೊಡೆ ಇದ್ದರೂ ಆಚೆ ಈಚೆನ ಮೊಡಂಬೋಡಿ ಸೊಪ್ಪುಂದ ನೀರ್ ರಟ್ಟಿ ಮೈ ಎಲ್ಲಾ ಚಂಡಿ ಆತ್. ಅದರೊಟ್ಟಿಗೆ ಕಿಸೆಲಿದ್ದ ದುಡ್ನ ಗ್ಯಾನ ಮಾಡ್ಕನ ಸೋಮಪಣ್ಣನ ನರ ಎಲ್ಲ ಉಬ್ಬಿಕೆ ಸುರಾತ್. ಕೈ ಕಾಲ್ ನಡ್ಗತಾ ಉಟ್ಟು, ಬಾಯಿ ಚಪ್ಪೆ, ಚಪ್ಪೆ ಆಗ್ತಾ ಉಟ್ಟು. ತಲೆಗೆ ಸರಾಯದ ಬೂತ ಹುಕ್ಕತ್. ಮನ್ಸಲಿ ನೆನ್ಸಿಕಂದೊ. "ಇದ್ನ ಅಕ್ಕಿಗೆ ಎಲ್ಲಾ ದುಡ್ಡು ಬೇಕಾಕಿಲೆ. ಹನ್ಯ ಸರಾಯ ಹಾಕಿ, ಉಳ್ದದರ ಅಕ್ಕಿ ತಕಂಡ ಹೋದರೆ ಆತ್."

ಸೀದಾ ಗಡಂಗ್ಗೆ ಹೋದ ಸೋಂಪಣ್ಣ, ಅರುವತ್, ಅರುವತ್ತೇ ಏರ್ಸಿಕೆ ಸುರುಮಾಡ್ದೊ. ಹಾಕುವ ರಭಸಲಿ ಹೆಣ್ಣಾಗಲಿ, ಮಕ್ಕಾಗಲಿ ನೆಂಪಾತ್ಲೆ. ದುಡ್ಡ್ ತಂದದ್ ಅಕ್ಕಿಗೇಂತ ಗ್ಯಾನನೇ ಇಲ್ಲೆ ಆ ಪುಣ್ಯಾತ್ಮಂಗೆ. ಸೋಂಪಣ್ಣ ಒಂದು ಹದಕ್ಕೆ ಬಾಕನ ಕಿಸೆಲಿ ಒಳ್ದದ್ ಮತ್ತೆ ಹತ್ತ್ ರುಪಾಯಿ ಮಾತ್ರ. ಆಗ ಮನೆನ ಹಸ್ದ ಹೊಟ್ಟೆಲಿರುವ ಮಕ್ಕಳ ನೆಂಪಾತ್. ಕಿಸೆ ಕಾಲಿ ಆವುಟು. ಆದ್ರೂ ಸೀದಾ ಅಂಗಡಿ ಕಡೆ ಹೋದೊ. ಅಂಗಡಿಯವರೊಟ್ಟಿಗೆ ಸಾಲಕ್ಕೇಂತ ಅಕ್ಕಿ ಕೇಳ್ದೊ. ಹಳೇ ಸಾಲ ಬೇಕಷ್ಟಿರಕನ ಹೊಸ ಸಾಲ ಕೊಡಿಕೆ ಅಂಗಡಿಯವು ಒಪ್ಪಿತ್ಲೆ. ಕುಡ್ದ್ ಬಂದ ಸೋಂಪಣ್ಣನ ಯಾರೂ ಹರ್ಕಂತ್ಲೆ. ಮನೇಲಿ ಉಂಬಕೆ ಅಕ್ಕಿ ಇಲ್ಲೆಂತ ಹೇಳ್ರೆ ಯಾರ್ ಕೇಳುವೆ ಹೇಳಿ...? ಅಂತೂ ಕಿಸೆಲಿ ಇದ್ದ ಹತ್ತ್ ರೂಪಾಯಿಲಿ, ಮಕ್ಕಳಿಗೆ ಮಿಕ್ಸ್ಚರ್ ಕಟ್ಟ್ಸಿಕಂಡ್ ಸೀದಾ ಮನೆಗೆ ಹೋದೊ. ಅಪ್ಪ ಅಂಗ್ಡಿಂದ ಬಾಕನ, ತಿಂಡಿ ಏನಾರ್ ತಂದವೇಂತ ಹೇಳಿ ಮಕ್ಕ ಕಾದ್ಕಂಡ್ ಕುದ್ದಿದ್ದೊ. ಶಾರದಕ್ಕಂಗೆ ಕತ್ತಲೆ ಊಟಕ್ಕೆ ಅಕ್ಕಿ ಬರ್ತಾ ಉಟ್ಟುಂತಹೇಳಿ ಸಮಧಾನ.

ಸೋಂಪಣ್ಣ ಮನೆ ಸೇರ್ಕನ ಒಸಿ ಕತ್ಲೆ ಆಗಿರುವ ಕಾರಣ, ಅಂಗಳಂದ ಮೆಟ್ಕಲ್ ಹತ್ಕನಮುಟ್ಟ, ನೀರಡಿಗೆ ಕಿಚ್ಚಾಕಂಡ್ ಇದ್ದ ಶಾರದಕ್ಕಂಗೆ ಅವು ಕಂಡತ್ಲೆ. ಸೋಂಪಣ್ಣ ಸೀದಾ ಹೋಗಿ ಚಿನೆಲಿ ಬೈರಾಸ್ ಹಾಕಿ ಕುದ್ದೊ. ಗಂಡನ ಕೈಲಿ ಯಾವುದೇ ಕಟ್ಟ್ ಕಾಂಬೊದ್ಲೆಂತ ಹೇಳಿ, ಶಾರದಕ್ಕ ಓಡ್ಯೋಗಿ ಗಂಡನಕ್ಕಲೆ ಕೇಳ್ದೊ. "ಅಕ್ಕಿ ಕಟ್ಟ್ ಎಲ್ಲುಟ್ಯ"

ಕುಡ್ದ ಅಮಲಲಿ ಇದ್ದ ಸೋಂಪಣ್ಣ, ಏನೋ ಹೇಳಿಕೆ ಹೊರ್ಟೊ. ಆದ್ರೆ, ಏನೂ ಹೇಳಿಕೆ ಆತ್ಲೆ. ಆಗ ಶಾರದಕ್ಕಂಗೆ ಗೊತ್ತಾತ್, ಕೊಟ್ಟ ದುಡ್ಡು ಏನಾತ್ಂತ. ಅವರ ಕಣ್ಲಿ ದರದರಾಂತ ನೀರ್ ಇಳಿಯಕ್ಕೆ ಸುರಾತ್. ಈ ತರದ ಅನುಭವ ಅವುಕ್ಕೆ ಬೇಕಾದಷ್ಟ್ ಇದ್ರೂನೂ, ಇಂಥಾ ಬಂಡಾಟ ಇಷ್ಟರವರೆಗೆ ಬಂದಿತ್ಲೆ. ಮಕ್ಕಳ ಎದರ್ ಗಂಡಂಗೆ ಬಯ್ಯೊದು ತಪ್ಪಾದೇಂತ ಹೇಳಿ, ಮನ್ಸ್‌ನ ಎಲ್ಲ ಉರಿನ ಹೊಟ್ಟೆಗೆ ಹಾಕಂಡ್, ಅಡ್ಗೆ ಕೋಣೆಗೆ ಹೋಗಿ ಮರ್ಟಕನ್ ಕುದ್ದೊ. ಸೋಂಪಣ್ಣನ ಕಿಸೆಲಿದ್ದ ಮಿಕ್ಚರ್ ಪರಿಮಳಕ್ಕೆ ಮಾಡಂಗೋಲ್‌ಲಿ ಮಲ್ಗಿದ್ದ ಕಾಳು ನಾಯಿ, ಸೋಂಪಣ್ಣನ ಹಕ್ಕಲೆ ಬಂದ್ ಕುಯಿ ಕುಟ್ಟಿಕೆ ಸುರು ಮಾಡ್ತ್. ಅಷ್ಟಾಕನ ಕಿಸೆಲಿದ್ದ ಮಿಕ್ಚರ್‌ನ ನೆಂಪಾದ ಸೋಂಪಣ್ಣ, ಸಣ್ಣ ಮಗಳ ಕರ್ದ. ಕಟ್ಟನ ಅವ್ಳ ಕೈಲಿ ಕೊಟ್ಟ್ ಮಗಳ ಮೋರೆನ ನೋಡ್ದೊ. ಮಗಳ ಖುಷಿಗೆ ಅವರ ಮೋರೆಲಿ ನಗೆ ಕಂಡರೂ, ಮನ್ಸ್ ಹೇಳ್ತಾ ಉಟ್ಟು "ಇಂದ್ ನಾ ನೀವ್ಗೆ ಅನ್ಯಾಯ ಮಾಡ್ತಾ ಒಳೆ" ಅಂತ. ಅಂತ್ರೂ ಅದರ ತೋರ್ಸಿಕಣದೇ ಎದೆ ಗಟ್ಟಿ ಮಾಡಿ ಕುದ್ಕಂಡೊ.

ಮಿಕ್ಸ್ಚರ್ ಕಟ್ನ ಹಿಡ್ಕಂಡ ಮಕ್ಕ ಸೀದಾ ಒಳಗೆ ಹೋಗಿ, ಹಳೆ ರಫ್ ಪುಸ್ತಕದ ಕಾಗದ ಹರ್ದ, ಅದರ ಐದ್ ಕಾಗದನ ಒಂದೊಂದಾಗಿ ಇಸಿ, ಮಿಕ್ಸ್ಚರ್‌ನ ಎಲ್ಲದಕ್ಕೂ ಸಮ ಪಾಲ್ ಮಾಡ್ದೊ. "ನಾವು ತಿಂಬಕೆ ಮುಂದೆ ಎಲ್ಲವುಕೂ ಪಾಲ್ ಕೊಡೊಕು" ಅಂತ ಹೇಳಿ ಬುದ್ದಿ ಮಾತ್ನ ಅವ್ವ ಹೇಳಿಕೊಟ್ಟ ಕಾರಣ, ತಿಂಡಿ ತಂದ ಅಪ್ಪಂಗೇ ಸುರುನ ಒಂದು ಪಾಲ್ ಕೊಡಿಕೆ ಸಣ್ಣ ಮಗಳ್ ಹೊರ್ಟತ್. ಅವ್ಳು ಕಾಗದಲಿ ಮುಡ್ಚಿದ ಒಂದು ಪಾಲ್ ಮಿಕ್ಸ್ಚರ್‌ನ ಓಡಿಹೋಗಿ ಅಪ್ಪನ ಕೈಗೆ ಕೊಟ್ಟ್ "ಅಪ್ಪಾ, ಅಪ್ಪ ಇದ್ ನಿಮ್ಮ ಪಾಲ್ ಮಿಕ್ಸ್ಚರ್.... ತಕಣಿ" ಅಂತ ಹೇಳ್ತ್. ಸೋಂಪಣ್ಣ ಕೈಲಿದ್ದ ಮಿಕ್ಸ್ಚರ್‌ನ ಒಮ್ಮೆ ನೋಡ್ದೊ, ಮತ್ತೆ ಮಗಳ ಮೋರೆ ನೋಡ್ದೊ. ಅವರ ಕಣ್ಲಿ ಬಳ ಬಳಂತ ನೀರ್ ಬಾತ್.

ಹಸಿವೆಲೇ ಇದ್ದ ಮಗಳ್ ಸೀದಾ ಅಡ್ಗೆ ಕೋಣೆಗೆ ಹೋಗಿ ಅವ್ವನ ಪಾಲ್ನ ಅವರ ಕೈಲಿ ಇಸಿತ್. ಅವರ ಮೋರೆನೂ ನೋಡದೇ ಹೊರಗೆ ಬಂದ್ ಅಕ್ಕನವರೊಟ್ಟಿಗೆ ಸೇರಿ ಮಿಕ್ಸ್ಚರ್ ತಿಂಬಕೆ ಸುರು ಮಾಡ್ತ್.

ಹಸ್ತಕಂಡ ಇದ್ದ ಮಕ್ಕ ಮಿಕ್ಸ್ಚರ್‌ನ ಕಾಗದಂದ ಒಂದೊಂದಾಗಿ ಹೆರ್ಕುತಿದ್ದೊ. ಅದರ ಬಾಗಲ್ನ ಬದಿಲಿ ನೋಡ್ತಿದ್ದ ಸೋಂಪಣ್ಣಂಗೆ ಕರಳ್ ಕಿತ್ತ್ ಬಂದಂಗೆ ಆತ್. "ಮಿಕ್ಸ್ಚರ್ ಮುಗ್ದ ಮೇಲೆ ಮಕ್ಕಳಿಗೆ ಹಸಿವೆಗೆ ತಿಂಬಕೆ ಏನ್ ಕೊಡ್ದು" ಅಂತ ಹೇಳಿ ಮನ್ಸ್ ಕರಗಿ ಹೋತ್. ಇಷ್ಟೆಲ್ಲಾ ಆಕನ ಸೋಂಪಣ್ಣಂಗೆ ಕುಡ್ದದ್ ನೆಲಕ್ಕೆ ಇಳ್ದಂಗೆ ಆತ್. "ನಾ ಎಂತಾ ನತದೃಷ್ಟ. ಇಂಥ ಮುಗ್ಧ ಮಕ್ಕಳ ಈ ರೀತಿ ನಡ್ಸಿಕಂತ ಒಳೆ. ಮಧ್ಯಾಹ್ನ ಶಾಲೆ ಬಿಸಿಯೂಟ ಉಂಡು ಬಂದಮೇಲೆ ಇಷ್ಟರವರೆಗೆ ಅವು ಹಸ್ತಕಣ್ ಕಂಗಾಲಾಗಿರ್ಕನ, ಮಕ್ಕ ಅವರ ಹಸಿವೆನ ಲೆಕ್ಕಕ್ಕೆ ತಕಣದೇ, ಅವ್ಕೇಂತಲೇ ತಂದ ತಿಂಡಿಲಿ ಒಂದು ಪಾಲ್ನ ನಂಗೆ ಕೊಟ್ಟೊಳೊ. ನಾ ನನ್ನ ಕುಡೆವ ಚಟಲಿ ಈ ಏನೂ ಗೊತ್ತಿಲ್ಲದ ಈ ಮಕ್ಕಳಿಗೆ ದ್ರೋಹ ಮಾಡ್ತಾ ಇದ್ರೂ, ಮಕ್ಕ ಅದರ ಯಾವುದೇ ಗೊಡವೆಲಿ ಇಲ್ಲದೇ, ಅವರೊಟ್ಟಿಗೆ ನನ್ನ ಹಸಿವೆನ ಕಮ್ಮಿ ಮಾಡಿಕೆ ನೋಡ್ತೊಳೊ. ಅವರ ಯೋಗ್ಯತೆಯ ಒಂದು ಪಾಲ್ ನಂಗೆ ಇಲ್ಲೆ. ಇಂಥ ಪರಿಸ್ಥಿತಿನ ತಂದ್ ಹಾಕಿದ ನಾ ಒಬ್ಬ ಮೊನ್ಸನಾ...? ಇಂಥ ಹೊತ್ತಲಿ ನನ್ನ ಹೆಣ್ಣ್ ಏನೂ ಹೇಳದೆ ಅಡ್ಗೆ ಕೋಣೆಲಿ ಕಣ್ಣೀರ್, ಸುರ್ಸಿಕಂಡ್ ಕುದ್ದುಟುಂತ ಹೇಳ್ರೆ, ನಾ ಯಾಕಾಗಿ ಈತರ ಆಗೊಳೆ". ಅವರ್ನೇ ಅವು ಪ್ರಶ್ನೆ ಮಾಡಿಕಂಡೊ. ಈ ಹೊತ್ತಲಿ ಸೋಂಪಣ್ಣಂಗೆ ಮನ್ಸ್‌ನ ಎಷ್ಟೊ ಗಟ್ಟಿ ಹಿಡ್ಕಂಡರೂ ತಡ್ಕಂಕೆ ಆತ್ಲೆ. ಅವರ ಎಲ್ಲಾ ಬೇನೆನೂ ಕಟ್ಟೆ ಒಡ್ದ ಬಾಯಿಲಿ ಹೊರಗೆ ಬಾತ್. ಓಡಿಹೋಗಿ ಮೂರು ಮಕ್ಕಳ ತಬ್ಬಿ ಹಿಡಕಂಡ್ ಬೊಬ್ಬೆ ಹೊಡ್ದ ಮಟ್ರೊ. ಅಡ್ಗೆ ಕೋಣೆ ಮೂಲೆಲಿ ಮಕ್ಕ ಕೊಟ್ಟ ಮಿಕ್ಸ್ಚರ್‌ನ ಕರೆಲಿ ಇಸಿ ಕುದ್ದಿದ್ದ ಶಾರದಕ್ಕ, ಹೊರಗೆ ಆಗ್ತಿದ್ದ ಬೊಬ್ಬೆನ ಕೇಳಿ, ಓಡಿಬಂದ್ ನೋಡ್ಕನ, ಅಪ್ಪ ಮಕ್ಕ, ಒಟ್ಟಿಗೆ ಸೇರಿ ಮರ್ದತ ಇರ್ದರ ಕಂಡೊ. ಅದರ ನೋಡ್ದ ಶಾರದಕ್ಕ ಬೇಜಾರು ಮಾಡ್ಕಂಡ್ ಎಲ್ಲರೊಟ್ಟಿಗೆ ಮರ್ದಿಕೆ ಸುರು ಮಾಡ್ದೊ.

"ಮಕ್ಕಳೇ ಇನ್ ಮುಂದೆ ನಾ ಕುಡಿಯೊದುಲೆ." ಅಂತ ಹೇಳಿ ಸೋಂಪಣ್ಣ ಎಲ್ಲರ ತಲೆ ಮೇಲೆ ಕೈ ಇಸಿದೊ. ಮತ್ತೆ ಮುಂದ್ವರ್ಸಿ "ಇಂಥ ಹೆಣ್ಣ್ ಮಕ್ಕಳ

ಪಡ್ದ ನಾ, ಇಷ್ಟರವರೆಗೆ ನೀವ್ಗೆ ಅನ್ಯಾಯ ಮಾಡ್ತಾ ಬಂದೆ, ಕಷ್ಟ ಕೊಟ್ಟೆ, ಉಂಬಕೆ ಮೂರ್ ಹೊತ್ತ್ ಸರಿಯಾಗಿ ಗಂಜಿ ಹಾಕಿಕೆ ನಂಗೆ ಯೋಗ್ಯತೆ ಇತ್ಲೆ. ನನ್ನ ಒಬ್ಬನ ಸುಖಕ್ಕಾಗಿ ಇಡೀ ಸಂಸಾರನ ಸರ್ವನಾಶ ಮಾಡಿಕೆ ಹೊರ್ಟಿದ್ದೆ. ಇಂದ್ ಅಷ್ಟೂ ಹಸ್ತಕಂಡಿದ್ದ ನೀವೆ ನೀವ್ಗೇಂತೇಳಿ ತಂದ ತಿಂಡಿಲಿ ನಂಗೆ ಪಾಲ್ ಕೊಟ್ಟೊರಲ್ಲ, ನಾ ನೀವ್ಗೇ ಎಷ್ಟ್ ಮೋಸ ಮಾಡ್ತಾ ಒಳೇಂತ ನೀವ್ಗೆ ಗೊತ್ತಿಲ್ಲೆ. ನಾ ಎಷ್ಟ್ ಕೆಟ್ಟವಾಂತ ನಂಗೆ ಈಗ ಅರ್ಥ ಆತ್. ಈ ಗಳಿಗೆಂದ ನಾ ಹಿಂದೆನ ಸೋಂಪ ಅಲ್ಲ. ನಾ ಇನ್ ಮುಂದೆ ನೀವ್ಗೆ ಇಂಥಾ ಕಷ್ಟ ನ ಯಾಗೋಳೂ ಕೊಡಿಕಿಲೆ". ಅಂತ ಹೇಳಿ ಮನ್ಸ ತಣೆಕನ ಮುಟ್ಟ ಮರ್ಟ್ ಬುಟ್ಟೊ. ಅವರ ಮೋರೆಲಿ ಪಶ್ಚಾತ್ತಾಪ ಕಂಡ ಶಾರದಕ್ಕನೂ ನಮ್ಮ ಎಲ್ಲಾ ಕಷ್ಟ ದೂರಾತ್‌ಂತ ಹೇಳಿ ಮನ್ಸ ಬಿಚ್ಚಿ ಮರ್ಟೊ. ಏನೋ ಒಳ್ಳೇದ್ ನಡೀತಾ ಉಟ್ಟುಂತ ಹೇಳಿ ತಿಳ್ಕಂಡ ಮಕ್ಕ ಅಪ್ಪ ಅವ್ವನೊಟ್ಟಿಗೆ ಮರ್ಡಿಕೆ ಸೇರಿಕಂಡೊ. ಎಷ್ಟದ್ರೂ ಹೆಣ್ಣ್ ಹೃದಯ ಅಲ್ಲಾ....!

ಆ ದಿನದ ಖುಷಿಯ ಘಳಿಗೆಲಿ, ಎಲ್ಲವುಕ್ಕೂ ಹಸಿವೆ ಮರ್ತೆಹೋತ್. ಎಲ್ಲೊವೂ ಅಲ್ಲಿಯೇ ನಿದ್ದೆಗೆ ಜಾರಿ ಹೋದೊ. ಈ ಕತೆ ನಡ್ದ್ ಬಾರಿ ವರ್ಷ ಕಳ್ದರೂ, ಸೋಂಪಣ್ಣ ಎಲ್ಲಿಯಾರ್ ಗಡಂಗ್ ಬಾಗಲ್‌ನ ದಾಟಿರೆ..., ಆ ದಿನ ಮಕ್ಕ ಮಿಕ್ಸ್ಚರ್ ತಿಂಬ ಕ್ಷಣ ಅವರ ಕಣ್ಣ್ ಮುಂದೆ ಬಂದ್ ಹೋದೆ.

✍ದೇವಿಪ್ರಸಾದ್ ಜಾಕೆ.

ಜಾಕೆ ಮನೆ
ಪಂಜ ಅಂಚೆ
ಸುಳ್ಯ.

ಕತೆ, ಕವನ ಅಥವಾ ಲೇಖನ ಬರೆವ ಮಕ್ಕ
ತಮ್ಮ ಇಸ್ಕೂಲ್‌ನ ಮುಖ್ಯಸ್ಥರ್‌ಂದ ದೃಢೀಕರಿಸಿ ಕಳ್ಸಿಕೊಡಿ.

# ರಕ್ಷಾ ಬಂಧನ

ಕಾವ್ಯ ಮದ್ವೆಯಾದ ಮ್ಯಾಲೆ ಗಂಡಂಗೆ ಕೆಲ್ಸ ಇದ್ರಂದ ಮುಂಬೈ ಸೇರಿತ್. ಗಂಡ ಕೆಲ್ಸಕೋಕನ ಇವ್ಳೊಬ್ಬೇ ಮನೆಲಿ ಇರ್ತಿತ್. ದಿನ ಬೆಳ್ಗಾದರೆ ಮನೆ ಕೆಲ್ಸಲಿ ಬಿಜಿಯಾಗಿತ್. ಈಗಸ್ಟೇ ಮೂರ್ ತಿಂಗಳ ಬಸ್ರಿ...

ಇಷ್ಟ್ ಸಮೆಲಿ ಡಾಕ್ಟ್ರಗೆ ತೋರ್ಸಿತ್ಲೆ... ಹಿಂದಿ ಸರಿಯಾಗಿ ಮಾತಾಡಿಕೆ ಬಾತಿತ್ಲೆ, ಇದೇ ಇವಳ ಸಮಸ್ಯೆಯಾಗಿತ್.

ನೆರೆ ಮನೆಯವರ ಹತ್ರನೂ ಮಾತಾಡಿಕೂ ಹೆದ್ರಿಕೆ. ಮುಂಬೈ ಮಂಸ್ರ್ ನಮ್ಮ ಊರ್‌ನಂಗಲ್ಲತ ಮೊದ್ಲೆ ಗಂಡ ಹೆದ್ರಿಸಿಟು.

ಆಸ್ಪತ್ರೆಗೆ ಹೋಕುತೇಳ್ವ ವಿಶ್ಯನ ತುಂಬಾ ಸಲ ಕಾವ್ಯ ಗಂಡನಕ್ಕಲಲೇ ಹೇಳಿತ್. ಕೊನೆಗೆ ಅವಂದ ಸಿಕ್ಕಿದ್ ಉತ್ತರ : ಅದೇ ಅಲ್ಲೆ... ರೈಲ್ವೇ ಸ್ಟೇಷನ್ ಹಕ್ಕಲೇ ಒಬ್ಬ ಗೈನೋಕಾಲಜಿಸ್ಟ್ ಉಟ್ಟು ಅಲ್ಲಿಗೆ ಹೋಗಿ ಬಾಕೆ ಅಲ್ಲಿನ ವಿಳಾಸನ ಕೊಟ್ಟಿತ್.

ಕಳ್ದ ಹಿಂಬೊತ್ತು ಸಮೆ ಆದರೂ ಬಾರದ ಗಂಡನ ಕಾದ್ ಕಾದ್ ಸುಸ್ತಾಗಿತ್. ಬಾಗ್ಲ್ ತಟ್ಟುವ ಸದ್ದ್ ಕೇಳ್ತಿದ್ದರೂ ತೆಗಿಯಕೆ ಮನ್ಸೇ ಬಾತ್ಲೇ. ಅಂದರೂ ಹೆದ್ರಿಕಂಡ್ ಬಾಗ್ಲ್ ತೆಗ್ತ್. ಬಾಯಿಂದ ಘಮ್ಮೆನ್ನುವ ವಾಸನೆ ಕೆಂಪಾದ ಮುಖ, ಇದನ್ನೆಲ್ಲ ನೋಡಿ ಕಾವ್ಯಂಗೆ ರೋಸಿಹೋಗಿತ್.

ಗೊತ್ತುಗುರಿ ಇಲ್ಲದ ಊರ್ಲಿ, ಒಬ್ಬಳ್ನೇ ಬುಟ್ಟು, ಇಷ್ಟ್ ರಾತ್ರಿ ಸಾರಾಯಿ ಕುಡ್ದು ಬಾದ? ಅಂವನ ಮ್ಯಾಲೆ ಸಿಟ್ಟ್ ಮಾಡ್ದಕೆ ಅವ್ಳ ಬೆನ್ನಿಗೆರಡ್ ಪೆಟ್ಟ್.

ಕಣ್ಣೀರ್ ಹಾಕಂಡೇ ಅವಂಗೆ ಊಟ ಹಾಕಿಕೊಟ್ಟಿತ್. ಇಬ್ಬರೂ ಮನ್ಸಿಲ್ಲದ ಮನ್ಸ್‌ಲಿನೇ ಊಟ ಮಾಡ್ದೊ.

ಮಾರ್ನೆ ದಿನ, ಯಾವ ವಿಶ್ಯನೇ ಆತ್ಲೆತೇಳುವಂಗೆ ಕಾವ್ಯನ ಗಂಡ ಅನಿಲ್ ಎದ್ದ್ ಆಫೀಸ್‌ಗೆ ಹೊರ್ಟ್ಪೇ ಹೋತ್.

ಬೆನ್ನ್ ಬ್ಯಾನೆ ಮುಂದೆರಡ್ ದಿನಲಿ ಜಾಸ್ತಿನೇ ಆತ್. ಮನ್ಸಿಲ್ಲದ, ಮನ್ಸ್‌ಲಿನೇ ರೈಲ್ವೇ ಸ್ಟೇಷನ್ ಹಕ್ಕಲೇ ಇದ್ದ ಕ್ಲಿನಿಕ್‌ಗೆ ಹೋತ್. ಜನ ಅಷ್ಟಿಲ್ಲದ  ಕಾರಣಲಿ ಡಾಕ್ಟರ್ ಹಕ್ಕಲೇ ಬೇಗ ಹೋಕೆ ಆತ್.

"ಡಾ|| ಕೃಷ್ಣಾನಂದ" ಶಾಂತಮಂಸ, ಹೆಚ್ಚ್ ಕಮ್ಮಿ ಅನಿಲ್‌ನ ವಯಸ್ಸ್‌ನವನೇ ಆಗಿರಕು. ಒಳಗೆ ಬಂದ ಕಾವ್ಯಂಗೆ ಯಾಕೋ ಗೊತ್ಲೇ ಅವನ ಮುಖ ನೋಡಿ ಧೈರ್ಯ ಬಂದಂಗೆ ಆತ್. ಅಂದರೂ ಅಲ್ಪ-ಸ್ವಲ್ಪ ಹಿಂದಿ ಮಾತಾಡಿ ಕಷ್ಟನ

ಹೇಳಿಕಂಡತ್. ಡಾ॥ ಕೃಷ್ಣನಂದ ಕಾವ್ಯನ ಪರೀಕ್ಷೆ ಮಾಡಿ ಬೇಕಾಗುವ ಟಾನಿಕ್‌ನೆಲ್ಲ ಕೊಟ್ಟ್ ಇನ್ನೊಂದ್ ವಾರಕಳ್ದ್ ಬಾಕೆ ಹೇಳಿಕಳ್ಸಿತ್.

ಅನಿಲ್, ಮುಂಬೈ ಮಂಸರ ಬಗ್ಗೆ ಜಾಗ್ರತೆಂದ ಇರಕುಂತೇಳಿರೆ, ಡಾಕ್ಟರ್‌ನಂಗೆ ಹತ್ರ ಆಕ್ತುಟ್ಟು. ಅಂದರೂ ಡಾಕ್ಟರ್ ಕೃಷ್ಣನಂದರ ಭೇಟಿಯಾಗಿ ಔಷಧಿಗಳ ತಕಂಬೊದು, ಪರೀಕ್ಷೆ ಮಾಡ್ಸಿಕಂಬೊದು ಅನಿವಾರ್ಯ ಆಗಿತ್. ಏಳ್ ತಿಂಗ ತುಂಬುತ್ತಿದ್ದಂಗೆ ಡಾಕ್ಟರ್ ಕೃಷ್ಣನಂದ ಅವ್ಳುಗೆ ತುಂಬಾ ಹತ್ರ ಆಗಿತ್. ಹೆರಿಗೆಗಾಗಿ ತವ್ರುಗೆ ಹೋಗ್ವ ದಿನ ಹಕ್ಕಲೇ ಆಗಿತ್.

ಕಾವ್ಯ ಕಡೆ ಸಮೆ, ಡಾಕ್ಟರ್ ಹತ್ರ ಪರೀಕ್ಷೆಗೆ ಹೋಗಿತ್. ಅವ್ಳಿಗೆ ಬೇಕಾದ ಟಾನಿಕ್ ಎಲ್ಲಾ ಬರ್ದ್ ಕೊಟ್ಟಿತ್. ಪ್ರಯಾಣ ಮತ್ತೆ ಲಾಯ್ಕ ಆರೋಗ್ಯವಾಗಿ ಹೆರಿಗೆ ಆಗಲಿತೇಳಿ ಹಾರೈಕೆ ಮಾಡಿ ಊರ್‌ಂದ ಬಂದ ಮ್ಯಾಲೆ ಕೂಸ್‌ನ ತೋರ್ಸಿಕೆ ಹೇಳಿ ಅವಳ್ನ ಕ್ಲಿನಿಕ್‌ಂದ ಕಳ್ಸಿತ್.

ತವ್ರುಗೆ ಬಂದ ಕಾವ್ಯ "ಸೀಮಾಂತ" ಕಾರ್ಯಗಳ್ನ ಮುಗ್ಸಿ ಅಮ್ಮ, ಪೊಪ್ಪ, ಅಕ್ಕ ತಮ್ಮಂದರ ಜೊತೆಲಿ ಖುಷಿಲಿ ಇದ್ದ್ ಗಂಡ್ ಕೂಸ್‌ಗೆ ಜನ್ಮ ನೀಡ್ತ್.

ಕೂಸ್‌ಗೆ ನಾಲ್ಕ್ ತಿಂಗ ತುಂಬುತ್ತಿದ್ದಂಗೆ ಮಂಬೈಂದ ಅನಿಲಂದ್ ಒಂದೇ ಸಮನೇ ಬಾ.... ಬಾ.... ತ ಕರೆಯೊದು ಶುರಾತ್. ಅನಿಲ್‌ಗೆ ಒಬ್ಬನೇ ಇದ್ದ್ ಬ್ಯಾಜರ ಆಗಿತ್. ಕಾವ್ಯ ಒಬ್ಬಳೆ ಬಾಕೆ ಬಂಗ ಆಗಿದ್ದರ್‌ಂದ ತಮ್ಮನ ಜೊತೆಲಿ ಮುಂಬೈಗೆ ಬಾತ್. ಕೂಸ್‌ಗೆ "ಹಿತೇಶ್" ತ ಮುದ್ದಾದ ಹೆಸ್ರ್ ಇಟ್ಟೊ.

ತಮ್ಮ ಸ್ವಲ್ಪ ದಿನ ಅಲ್ಲಿನೇ ಇದ್ದ್ ಊರ್‌ಗೆ ವಾಪಾಸ್ಸಾತ್. ಮನೆಕೆಲ್ಸ, ಕೂಸ್, ಅಡ್ಗೆ ಕೆಲ್ಸತೇಳಿ ಕಾವ್ಯ ತುಂಬಾ ಕಷ್ಟಾಪಟ್ಟ್ ಎಲ್ಲಾ ನಿಬಾಯಿಸ್ತ್‌ತಿತ್ತ್.

ಊರ್ ಬದಲಾದ್ರಂದ ಏನೋ ಕೂಸ್‌ಗೆ ಶೀತ, ಕೆಮ್ಮು ಜೊತೆಲಿ ಜ್ವರನೂ ಬಂದಿತ್. ಡಾಕ್ಟರ್ ಕೃಷ್ಣನಂದನ ಹಕ್ಕಲೇ ಹೋದು ಅನಿವಾರ್ಯವಾಗಿತ್ತ್.

ಮುದ್ದು ಕಂದನ ಎತ್ತಿಕಂಡ್ ಕಾವ್ಯ ಹೋತ್. ಕಾವ್ಯನ ಕಂಡ್ ಡಾ॥ ಕೃಷ್ಣನಂದಂಗೆ ಆಶ್ಚರ್ಯ ಆತ್. ಹಿತೇಶ್‌ನ ಎತ್ತಿಕಂಡ್ ಮುದ್ದು ಮಾಡಿ, ಕೂಸ್‌ಗೆ ಬೇಕಾದ ಟಾನಿಕ್ ಜೊತೆಗೆ ಕಾವ್ಯಂಗೂ ಅಗತ್ಯ ಔಷಧಿ ಕೊಟ್ಟುಕಳ್ಸಿತ್.

ಹಿಂಗೆ ಹಿತೇಶ್‌ಗಾಗಿ ಡಾಕ್ಟರ್ ಕೃಷ್ಣನಂದನ ಭೇಟಿ ಆಗಾಗ ನಡಿತಿತ್ತ್. ಕ್ಲಿನಿಕ್‌ಗೆ ಹೋಗಿ ಬಂದಾಕನೆಲ್ಲ ಸ್ವಂತದವರ್ನ ಮಾತಾಡ್ಸಿದಂಗೆ ಅನುಭವ ಆಗ್ತಿತ್ತ್.

ಹಿತೇಶ್‌ನ ಒಂದನೇ ವರ್ಷದ ಹುಟ್ಟು ಹಬ್ಬದ ಆಚರಣೆಗೆ ಹಕ್ಕಲೆ ಬಂದಿತ್.

ನಾಲ್ಕ್ ದಿನ ಇನ್ನ್ ಉಟ್ಟುತೇಳ್ವಾಕನ ಜ್ವರ ಜಾಸ್ತಿಯಾಗಿತ್. ಹುಟ್ಟು ಹಬ್ಬದ

ದಿನನೇ "ರಕ್ಷಾಬಂಧನ"ದ ಹಬ್ಬ ಇರ್ದ್‌ರ್‌ಂದ ಹಿತೇಶ್‌ನ ಕೈಗು ಹಕ್ಕಲೇ ಮನೆ ಮಕ್ಕಳ್‌ಂದ ರಕ್ಷಾ ಸೂತ್ರನ ಕಟ್ಟಿಸೊಕುತೇಳ್ವ ಆಸೆ ಇವಳ್ನ ಕಾಡ್ತ್.

ಹಿತೇಶ್‌ಗೆ ಹುಷಾರಿಲ್ಲದ್ರಂದ ಡಾಕ್ಟರ್ ಹಕ್ಕಲೆ ಕರಕಂಡ್ ಬಾತ್. ಹುಟ್ಟುಹಬ್ಬದ ಸಮೆಲಿ ಜ್ವರನು ಬಂದ್ರಂದ ವಿಶ್ಯನೆಲ್ಲ ಡಾಕ್ಟರ್‌ಗೆ ಹೇಳ್ತ್. ಟಾನಿಕ್‌ನೆಲ್ಲ ಕೊಟ್ಟ್ ಬೇಗ ಹುಷರಾಗಲಿತೇಳಿ ಹಾರೈಸಿ ಹುಟ್ಟುಹಬ್ಬದ "ಸಂಭ್ರಮಕ್ಕೂ ಹಾರೈಸಿ" ಹುಟ್ಟುಹಬ್ಬದ ಆಚರಣೆಗೆ ಶುಭಾಶಯ ಕೋರಿದವ "ಎಲ್ಲಿ ನಂಗೆ ಆಮಂತ್ರಣ, ಇಲ್ಲೆನ"ತ ತಮಾಸಿ ಮಾಡ್ತ್.

ಹಂಗೆ ಡಾಕ್ಟರ್‌ನ ಕೂಡ ಮಾಮೂಲಿ ಮಾತ್‌ಲಿ "ಬಂದು ಬಿಡಿ" ಅಷ್ಟೇ ಕರ್ತ್. ಡಾಕ್ಟರ್ ಪಾರ್ಟಿ ಟೈಮ್ನ ವಿಚಾರ್ಸಿತ್.

ಹಿತೇಶ್ ಡಾಕ್ಟರ್ ಕೊಟ್ಟ ಔಷಧಿಂದ ಹುಟ್ಟು ಹಬ್ಬದ ದಿನ ಪೂರ್ಣ ಆರೋಗ್ಯಂದ ಆಡಿಕಂಡ್ ಇತ್ತ್.

ರಕ್ಷಾ ಬಂಧನ ಅದೇ ದಿನ ಇದ್ರಂದ ಹಕ್ಕಲೇ ಮನೆನ ಮಕ್ಕಳನೆಲ್ಲ ಕಾವ್ಯ ಮನೆಗೆ ಕರ್ಕಂಡ್ ಬಂದಿತ್.

ದೇವ್ರ ಗುಡಿಲಿ ಹೊತ್ತಿಸಿಟ್ಟ ದೀಪ, ರಕ್ಷಾಸೂತ್ರ, ಸಿಹಿತಿಂಡಿಗ ಇನ್ನೇನ್ ಹಿತೇಶ್‌ಗೆ ಆರತಿ ಮಾಡಕುತೇಳ್ವಾಕನ ಮನೆ ಬೆಲ್ ಸದ್ದ್ ಮಾಡ್ತ್. ಬಾಗ್ಲ್ ತೆಗ್ದ್ ನೋಡ್ವಾಕನ ಡಾ॥ ಕೃಷ್ಣನಂದ! ಅನಿಲ್ ಏನಾದರ್ ತಿಳ್ಕಂಡರೆತ ಕಾವ್ಯನಲ್ಲಿ ಹೆದ್ರಿಕೆ ಸುರಾತ್.

ಒಂದ್ ಮಾಮೂಲಿ ಬಾಯಿ ಮಾತ್ನ ಆಮಂತ್ರಣತೇಳಿ ಮುಖ್ಯಾಗಿ ತಿಳ್ಕಂಡ್ ಇಂವ ಇಲ್ಲಿಗೆ ಬಂದ ಉದ್ದೇಶ ಆದರ್ ಏನ್?ತ ಮನ್ಸ್‌ಲಿನೇ ಗ್ಯಾನ ಮಾಡ್ತ್ ಕಾವ್ಯ.

ಡಾಕ್ಟರ್ ಕೃಷ್ಣನಂದತ, ಗಂಡ ಅನಿಲ್‌ಗೆ ಪರಿಚಯ ಮಾಡಿಕೊಟ್ಟತ್. ಅನಿಲ್ ಖುಷಿಂದ ಒಳಗೆ ಬನ್ನಿತೇಳಿ ಆಹ್ವಾನಿಸಿತ್. ಒಳಗೆ ಬಂದ ಡಾಕ್ಟರ್ ಹಿತೇಶ್‌ನ ಮುದ್ದ್‌ಮಾಡಿ, ತಂದ ಉಡುಗೊರೆ, ಆಟದ ಸಾಮಾನ್ ಕೊಟ್ಟತ್.

ಡಾಕ್ಟರ್ ಕೃಷ್ಣನಂದನ ಬ್ರೀಫ್ ಕೇಸ್‌ಲಿ ಇನ್ನೊಂದ್ ಉಡುಗೊರೆ ಕಾವ್ಯನ ಗಮನ ಸೆಳ್ತ್....

ಜ್ಯೂಸ್, ತಿಂಡಿನ ಕೃಷ್ಣನಂದಂಗೆ ತಂದ್‌ಕೊಟ್ಟತ್ ಕಾವ್ಯ. ಈ ಮಾಂಸ ಬೇಗ ಹೋದಷ್ಟ್ ಒಳ್ಳದೆತೇಳಿ ಮನ್ಸ್‌ಲೇ ಗ್ಯಾನ ಮಾಡ್ತ್. ತಿಂಡಿ ಮತ್ತೆ ಜ್ಯೂಸ್‌ನ ಬಾಯಿಲಿ ಹಾಕಂಡ್ ಕೃಷ್ಣನಂದ ಅನಿಲ್ ಜೊತೆಲಿ ಬಾಮ್ಮೈದನ ಹಂಗೆ ಮಾತಾಡಿಕೆ

ಸುರು ಮಾಡ್ಡೋ.

ಇವಿಬ್ಬರು ಮಾತಾಡ್ದನ್ನ ಕಂಡ ಕಾವ್ಯ, ಮಕ್ಕಳಿಗೆಲ್ಲ ತಿಂಡಿ ಜ್ಯೂಸ್‌ಗಳನ್ನ ಕೊಟ್ಟ್, ಹಿತೇಶ್‌ಗೆ ಆರತಿ ಮಾಡ್ಸಿ ಪುಟ್ಟ ರಾಖಿನ ಕಟ್ಟಿತ್...

ಹಿತೇಶ್‌ಗೆ ರಾಖಿ ಕಿರಿ ಕಿರಿ ಅನ್ಸಿ ಅದನ್ನ ಕೀಳ್ವಂಗೆ ಬಾಯಿಗೆ ಹಾಕ್ಕಂಡ್ ಮಾಡ್ತಿತ್. ಕೂಸ್‌ಗೆ ಮುತ್ತಿಟ್ಟ್, ಮುದ್ದಿಸಿ ಹೊರಡ್ವ ತಯಾರಿ ಮಾಡ್ತ್ ಡಾಕ್ಟರ್ ಕೃಷ್ಣನಂದ.

ಹೊರ್ಟವ ಒಂದ್ ಕ್ಷಣ ಅನಿಲನ ಕಡೆ ತಿರ್ಗಿ "ಇಫ್ ಯು ಡೋಂಟ್ ಮೈಂಡ್ ಸರ್"ತ ಹೇಳಿ ತಲೆತಗ್ಗಿಸಿ ಸುಮ್ಮನಾತ್.

ಅನಿಲ್‌ಗೆ ಏನ್ ತಿಳೀಯದೇ ಅವನನೇ ನೋಡ್ತ ಹಂಗೆ ನಿತ್ತತ್. ಮಕ್ಕಳ ಮಧ್ಯ ಇದ್ದ ಕಾವ್ಯ, ಇಂವ ಹೋದ ಮ್ಯಾಲೆ ನಂಗೆ ಏನಾರ್ ಅನಿಲ್ ಹೇಳಿ ಜಗಳ ಮಾಡ್ರೇತ ಹೆದ್ರಿಕೆ ಹುಟ್ಟಿತ್. ಹೆದ್ರಿಕಂಡ್ ಅಂವ ಹೊರ್ಟ ಕಡೆ ನೋಡ್ತಾ ಇರ್ಕನ, ಕಾವ್ಯನನೇ ದಿಟ್ಟಿಸಿ ಕೃಷ್ಣಾನಂದ, "ಕಾವ್ಯ ಐ ಹ್ಯಾವ್ ಒನ್ ಸ್ಮಾಲ್ ರಾಖಿ; ಗೀಫ್ಟ್ ಫಾರ್ ಯು"

ಬ್ರೀಫ್ ಕೇಸ್‌ಂದ ರಾಖಿ ತೆಗ್ದ್ ಅವಳ ಕೈಲಿಟ್ಟ್, ಕೃಷ್ಣನಂದನ ಕಣ್ಣ್‌ಲಿ ಒಂದೇ ಸಮನೆ ನೀರ್ ಬಾತ್.

"ಸಾರಿ ಪ್ಲೀಸ್, ನನ್ನ ತಪ್ಪಾಗಿ ತಿಳ್ಕಬೆಡಿ ನಾ ನನ್ನ ಪೊರ್ಲುನ ತಂಗೆ 'ಕಾವ್ಯನ' ಕಾರ್ ಆ್ಯಕ್ಸಿಡೆಂಟ್‌ಲಿ ಕಳ್ದ ವರ್ಷ ಕಳ್ಕಂಡೆ."

"ದೇವ್ರು ನಂಗೆ ಈ ವರ್ಷ ಇನ್ನೊಂದ್ ತಂಗೆ ಕಾವ್ಯನ ಕಳ್ಸಿಟು, ದೇವ್ರುಗೆ ನಾ ಋಣಿ ಮತ್ತೆ ನಿಮಗೆನೂ" ಕೃಷ್ಣನಂದನ ಮಾತ್ ಕೇಳಿ ಅನಿಲ, ಕಾವ್ಯ ಮುಖ ಮುಖ ನೋಡಿಕಂಡ್ ನಿತ್ತೋ.

ಕಾವ್ಯ ಮೇಜ್‌ಲಿದ್ದ ಆರತಿ ತಟ್ಟೆ ತಂದ್, ಕೃಷ್ಣನಂದನ ಕೂರ್ಸಿ ಆರತಿ ಮಾಡಿ ಹಣೆಗೆ ಬೊಟ್ಟಿಟ್ ಕೈಗೆ ರಾಖಿ ಕಟ್ಟಿ, ಕಾಲ್‌ಗೆ ನಮಸ್ಕಾರ ಮಾಡ್ತ್.

ಕೃಷ್ಣನಂದ ಅನಿಲ್‌ನ ಪ್ರೀತಿನ ಬಾವ ಆತ್. ಕಾವ್ಯನ ಮನ್ಸ್‌ಲಿ ಕೃಷ್ಣನಂದನ ಮ್ಯಾಲಿದ್ದ ಅನುಮಾನ, ಹೆದ್ರಿಕೆ ದೂರ ಆತ್. ಪ್ರೀತಿನ ಅಣ್ಣ ಸಿಕ್ಕಿತೇಳಿ ತವರಿಲಿದ್ದ ತಮ್ಮನ ಗ್ಯಾನ ಆತ್.

✍ಕೊಕ್ಕಲೇ ಮಾಲಿನಿ ಮುತ್ತಪ್ಪ

ಹೆರವನಾಡು ಗ್ರಾಮ,
ಅಪ್ಪಂಗಳ ಅಂಚೆ, ಮಡಿಕೇರಿ.
ಮೊ : 9448907293.

# ಅಮ್ಮಾ

ಹೊತಾರೆ ಸುಂದರ ಕನಸ್‌ಗಳನ್ನ ಕಂಬಳಿಯೊಳ್ಗೆ ಹಿಡಿದಿಟ್ಕಂಡು ಆ ಜೋಪಡಿಯ ಮೂಲೆಲಿ ಹೊದ್ದ್ ಮಲಗಿದ್ದ ಶುಕ್ರಂಗೆ ಚಾವಡಿಯ ಹೊರಭಾಗಲಿ ಕಸಗುಡುಸುತ್ತಿದ್ದ ಯಮುನಾಳದ್ ಚೀಪೆಯ ಪರಪರ ಸದ್ದ್ ಸ್ವಲ್ಪ ರಸಭಂಗ ಮಾಡ್ತಿತ್. "ಇಂದಾರ್ ಬೇಗ ಎದ್ದೇಳಿ. ಹೊತ್ತ್ ಒಂದ್ ಗೇಣ್ ಆಗಲೇ ಮೇಲಕ್ಕೆ ಬಂದಂಗೆ ಆತ್. ಬೇಗ ಬಿಂದಿಗೆ ತಕಂಡ್ ಕೆರೆಗೆ ಹೋಗಿ ಅಡಿಗೆಗೆ ನೀರ್ ತರೋಕು." ಸೊಂಟಕ್ಕೆ ಸೀರೆನ ಸಿಕ್ಕಿಸಿಕಂಡ್ ಯಮುನಾ ಗಂಡ ಶುಕ್ರಂಗೆ ನೀರ್ ತಾಕೆ ಹೇಳಿಕಂಡ್ ಕಸ ಗುಡಿಸುತ್ತಾ ಇತ್ತ್. ಆಗ ಶುಕ್ರಂಗೆ ಕಟ್ಟಿದ್ದ ಕನಸ್‌ಯೆಲ್ಲಾ ಹರಿದ್ ಅವಂಗೆ ಪೂರ್ತಿ ಎಚ್ಚರ ಆಗೋತ್.

"ಏ ಯಮ್ಮೀ ಇಂದೇನು ನೀನ್ ಒಲೆ ಹಚ್ಚುದೇ ಬೇಡ. ಶಂಕ್ರ ಐತ್ತಾಳರ ಹೋಟೆಲಿಗೆ ಊಟಕ್ಕೆ ಹೋದರೆ ಆತ್" ಪೂರ್ತಿ ಎಚ್ಚರ ಆದ ಶುಕ್ರ ಕಂಬಳಿನ ದೂರ ತಳ್ಳಿಕಂಡ್ ಯಮುನಾಂಗೆ ಹೇಳಿತ್. "ಐತ್ತಾಳರು ಏನ್ ಪುಕ್ಸಟೆ ಊಟ ಹಾಕಿಕೆ ಅವರಮ್ಮನ ತಿಥಿನಾ ಇಂದ್? ರಂಗಪ್ಪ ಶೆಟ್ಟರದ್ ಕುಮಟ ಅಂಗಡಿದು ಸಾಲ ಕಟ್ಟದೆ ಒಂದ್ ವಾರ ಆಗೋತ್. ಈಗ ಐತ್ತಾಳ್ ಹೋಟೆಲ್ ಉಂಬಕೆ ಹಣನ ಎಲ್ಲಿಂದ ತಂದಿಯಾ ನೀನ್?" ಸೊಂಟಕ್ಕೆ ಸಿಕ್ಕಿಸಿದ ಸೀರೆಯ ಸೆರ್‌ಗುನ ಕೆಳಗೆ ಇಳಿಸಿಕಂಡ್ ಯಮುನಾ ಗಂಡ ಶುಕ್ರನ ಕೇಳ್‌ತ್. ಆಗ ಶುಕ್ರ ಹೇಳ್‌ತ್ "ನೋಡೇ ಯಮ್ಮೀ ಮೊನ್ನೆ ದಡ್ಡರಹಳ್ಳಿಯ ಶ್ಮಶಾನದ ಹೊರಭಾಗಲಿ ಕಟ್ಟಿದ ವೃದ್ಧಾಶ್ರಮಕ್ಕೆ ಮುದುಕರುನ ಕರ್‌ಕಂಡ್ ಸೇರಿಸಿದವುಕೆ ಅಲ್ಲಿನ ಮ್ಯಾನೇಜರ್ ಹಣ ಕೊಟ್ಟವೆ. ಅವರನ್ನು ಲಾಯಿಕೆ ನೋಡಿಕಂಡವೆ. ನಿನ್ನಪ್ಪ ಅಂಗಾರೆ ಮಾವನ ಅಲ್ಲಿಗೆ ಸೇರ್‌ಸಿನೆ.

ಹಂಗೆ ಹೇಳಿ ದುಡ್ಡ್ ತಕಂಡ್ ಬನ್ನೆ. ನಿಂಗೆ ನಂಬಿಕೆ ಬರದಿದ್ರೆ ಆ ಹಗ್ಗದ ತುದಿಲಿ ತೂಗು ಹಾಕಿದ ಗೀಟ್ ಗೀಟ್ ಶರ್ಟ್‌ಲಿ ಒಳಕಿಸೆಲ್ಲಿ ನೋಡ್. ಒಂದ್ ವಾರ ಕೂಲಿ ಕೆಲ್ಸ ಮಾಡ್ರೂ ಕೂಡ ಸಿಗದಷ್ಟು ಹಣ ಅದರಲ್ಲಿ ಉಟ್ಟು.

"ಏನ್, ನನ್ನಪ್ಪನ ಅಲ್ಲಿಗೆ ಸೇರ್ಸುದಾ? ಖಂಡಿತ ಬೇಡಾ. ಇನ್ನ್ ನಾಲ್ಕು ಮನೆಗೆ ದೊಡ್ಡ ಕೂಲಿಗೆ ಹೋನೆ. ನೀವ್ ಕುಡಿಯೋದ್ ಸ್ವಲ್ಪ ಕಮ್ಮಿ ಮಾಡಿ.

ನಮ್ಮಪ್ಪ ಲಾಯಿಕ ಇರುವಷ್ಟು ದಿನಾರೂ ಇಲ್ಲೇ ಇರ್‍ಲಿ. ನಾವೇ ನೋಡಿಕಂಡರೆ ಆತ್." ತೇಳಿ ಸ್ವಲ್ಪ ಸಿಟ್ಟ್‌ಂದಲೇ ಯಮುನಾ ಗಂಡಂಗೆ ಹೇಳುತ್ತಿರ್‌ಕಾಕನ ಬೀಡಿ ಸೇದಿಕಂಡ್ ಬಿಂದಿಗೆ ತಕಂಡ್ ಕೆರೆಬದಿಗೆ ಹೋಕನ ಮಾವ ಕೆಮ್ಮುತ್ತಿದ್ದ ಸದ್ದ್ ಆ ಹಾಡಿನವುಕೆ ಕೇಳಿಸಿವುಟು. ಯಮ್ಮೀನ ಮಾತಿಗೆ ವಿರೋಧ ಹೇಳಿಕೆ ಆಗದೆ ಶುಕ್ರ "ಸರಿ ಹಂಗಾದ್ರೆ ಇಲ್ಲೇ ಕೆಮ್ಮಿ ಕೆಮ್ಮಿ ಇರ್‍ಲಿ ನಿನ್ನಪ್ಪ ಅಂಗಾರೆ, ಆ ಆಶ್ರಮದ ಮ್ಯಾನೇಜರ್‌ನ ಕೈಯಿಂದ ತಕಂಡ ಮುಂಗಡ ಹಣದ ಸಾಲನ ನೀನೇ ಕೂಲಿಮಾಡಿ ತೀರ್‍ಸು"ತೇಳಿ ಬಿಂದಿಗೆ ತಕಂಡ್ ಕೆರೆ ಕರೆಗೆ ಹೋಗುಕಾಕನ, ತಾನು ಯಾಗೋಳು ಕೂಲಿಗೆ ಹೋಗುಕಾಕನ ಸಾಹುಕಾರ್ ಸಿಂಗಪ್ಪನವು ಹೇಳ್ದ ಮಾತ್ ನೆನಪಾತ್.

ಸಿಂಗಪ್ಪನವು ತಮ್ಮ ಹೆಣ್ಣ್‌ನ ಒಟ್ಟಿಗೆ ಅಮೇರಿಕಾ ದೇಶಕ್ಕೆ ಪ್ರವಾಸ ಹೋಕುತೇಳಿ ನಾಲ್ಕೈದು ತಿಂಗಂದ ಯೋಚನೆ ಮಾಡಿದ್ದೊ. ತಮ್ಮ ತಾಯಿ ಕಾವೇರಮ್ಮನವ್ರ ಬಿಟ್ಟಿರಿಕೆ ಆಗದೆ ಪ್ರವಾಸ ಮುಂದೂಡುತ್ತಾ ಇದ್ದೊ. ಸಕ್ಕರೆ ಕಾಯಿಲೆ ಜೊತೇಲಿ ರಕ್ತದೊತ್ತಡವು ಜಾಸ್ತಿ ಆಗಿ ಲಕ್ವಕ್ಕೆ ಒಳಗಾಗಿದ್ದೊ. ಕಾವೇರಮ್ಮನವು ತನ್ನ ಅಂತಿಮ ದಿನದ ಕ್ಷಣಗಣನೆಯಲ್ಲಿದ್ದೂ ಇನ್ನೂ ಮೃತ್ಯು ಕೃಪೆ ಹತ್ರಕ್ಕೆ ಬಾತ್ಲೆ. ಇದರೊಂದಿಗೆ ಸಿಂಗಪ್ಪನವು ಬಹಳ ಕಷ್ಟಪಟ್ಟು ಮಾಡಿಸಿದ್ದ ಅಮೇರಿಕಾದ ವೀಸಾದ ಅವಧಿ ಸ ಮುಗಿಯಕ್ಕೆ ಆತು, ಅವುಕೆ ಒಂದು ದೊಡ್ಡ ಚಿಂತೆ ಆಗುಟು. ಯಾರಾದ್ರೂ ನನ್ನ ಅಮ್ಮನ ನಾಲ್ಕೈದು ತಿಂಗ ನೋಡಿಕಣಿಕೆ ಸಿಕ್ಕಿದ್ದರೆ ತಾವು ಅಮೇರಿಕಾಕ್ಕೆ ಹೆಣ್ಣ್‌ನೊಂದಿಗೆ ಹೋಗಿ ಬಾಕೆ ಆತಿತ್ತ್. ಸಿಂಗಪ್ಪನವೇ ಮೊದಲೊಂದು ದಿನ ಕೆಲ್ಸಕ್ಕೆ ಬಂದಿದ್ದ ಶುಕ್ರ ಜತೇಲಿ ತಮ್ಮ ಸಮಸ್ಯೆನ ಹೇಳ್ತಾ ಇದ್ದೊ. "ಶುಕ್ರಾ, ನಾವು ಅಮೇರಿಕಾಕ್ಕೆ ಹೋಗೊಕೂತ ಏರ್ಪಾಡು ಮಾಡ್ಯೊಳೊ. ಆಗ ನೀನ್ ಮತ್ತು ಯಮುನಾ ಇಬ್ಬರೂ ನಮ್ಮ ತೋಟದ ಮನೇಲಿ ನಿಲ್ಲೋಕು. ಮತ್ತೆ ನನ್ನ ತಾಯೀನ ನೋಡಿಕಂಡ್ ಇರೋಕು. ಹಣಕ್ಕೇನು ಚಿಂತೆ ಮಾಡ್ದು ಬೇಡ ಎಲ್ಲ ಖರ್ಚುನ ನಾನೇ ಕೊಟ್ಟನೆ. ನಾವಲ್ಲಿಗೆ ಹೋದಂಗೆ ಒಂದು ಸಮಯ ಅಮ್ಮಂಗೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ ನಮ್ಗೆ (ಅಲ್ಲಿಗೆ) ತಿಳಿಸುವ ಅಗತ್ಯವೇನೂ ಇಲ್ಲೆ. ನಾವು ಬಂದಮೇಲೆ ಮಾಡಿಕೆ ಏನ್ ಇದ್ದದೆ? ನೀವೇ ಎಲ್ಲ ಕ್ರೀಯೆನ ಸರಿಯಾಗಿ ಮಾಡಿ ಮುಗಿಸಿ. ನಾವು ಅಮೇರಿಕಾಂದ ತರ್ಪಣ ಕೊಟ್ಟುಬಿಟ್ಟವೆ.

ನೀವುಗೆ ಆದಾ?"

ಸ್ವಲ್ಪ ಹೊತ್ತು ಯೋಚಿಸಿಬುಟ್ಟು ಶುಕ್ರ ಧಣಿಗಳಿಗೆ ಹೇಳ್ತ್ "ಧಣಿಗಳೇ ಇದು ತುಂಬಾ ಜವಾಬ್ದಾರಿ ತಕಂಡ್ ಮಾಡುವ ಕೆಲ್ಸ. ನೀವ್ ಅಲ್ಲಿರುಕಾಕನ ದೊಡ್ಡಮ್ಮಂಗೆ ಏನಾದ್ರೂ ಹೆಚ್ಚು ಕಮ್ಮಿ ಆದ್ರೆ ತಾಪತ್ರೆ ಆದೆ. ಆದ್ರೂ ಯಾವುದಕ್ಕೂ ಕಾದು ನೋಡೋಕು." ಧಣಿಗಳು ದೊಡ್ಡ ಮೊತ್ತದ ಹಣ ಕೊಡುಕಾಕನ ಅದರ ಆಸೆ ಅವನ ಸ್ವಲ್ಪ ಹೊತ್ತು ಸೆಳೆದರೂ ಕೂಡ ತಕಂಬಕೆ ಬೇಕಾದ ಹೊಣೆ ಅವನ ತಡೆದಿತ್ತ್. ಈಗ ದಡ್ಡರ ಹಳ್ಳಿಲಿ ಹೊಸತಾಗಿ ಆದ ಅನಾಥಾಶ್ರಮ ಅವಂಗೆ ಆಶಾಕಿರಣ ಆಗಿ ಕಂಡತ್. ಧಣಿಗಳಿಂದ ಹಣ ಸಿಕ್ಕಿದೆ. ಮೇನೇಜರಿಂದ ಕೂಡ ಹಣ ಸಿಕ್ಕಿದೆ. ಜತೆಗೆ ನಂಗೆನೂ ತೊಂದರೆಯಿಲ್ಲೆ. ಯಾವುದಕ್ಕೂ ಸಾಹುಕಾರ್ ಸಿಂಗಪ್ಪನವರನ್ನೊಮ್ಮೆ ಕಂಡ್ ಕೇಳಿಬನ್ನೆತೇಳಿ ಕೆರೆಯ ದಂಡೆಯ ಕೆಲ್ಸ ಮುಗ್ಸಿಕಂಡ್ ದಾಪುಗಾಲು ಹಾಕಿಕಂಡ್ ಹಾಡಿಗೆ ತಲುಪುಕಾಕನ ಆಕಾಶಲಿ ಅಲ್ಲಲ್ಲಿ ಬಿಳಿಮೋಡಗ ತೇಲುತ್ತಾ ಇದ್ದೊ.

ಶುಕ್ರ ಸಾಹುಕಾರ ಸಿಂಗಪ್ಪನವರ ಬಂಗ್ಲೆ ತಲುಪುಕಾಕನ ಮಧ್ಯಾಹ್ನ ಆಗಿತ್ತ್. ಲಕ್ವಂದ ಗೂರು ಖಾಯಿಲೆಗೆ ತುತ್ತಾದ ಅಜ್ಜಿ ಕಾವೇರಮ್ಮ ಉಸಿರಿಗೆ ಗೊರ್ ಗೊರ್‌ತೇಳಿ ಒದ್ದಾಡುತ್ತಾ ಇದ್ದ ಸದ್ದ್ ಸಿಂಗಪ್ಪನವರ ಗೇಟಿಗೆ ಕೇಳ್ತಿತ್ತ್. "ಶುಕ್ರ ನೀನ್ ಬೇಗ ಬಂದದ್ದ್ ಒಳ್ಳೆದಾತ್. ಯಾವುದಕ್ಕೂ ನಿನ್ನ ಹೆಣ್ಣ್ ಯಮುನಾಂಗೆ ಒಂದ್ ಮಾತ್ ಹೇಳಿಬುಡು. ಅವಳಿಗೆ ಬೇಕಷ್ಟು ಕೊಟ್ಟನೆ, ಒಟ್ಟಾರೆ ಅಮ್ಮಾ ಬದುಕಿದಷ್ಟು ದಿನ ನೀವಿಬ್ಬರೂ ಅವರನ್ನು ನೋಡಿಕೊಣ್ಣೊಕು. ಇನ್ನ್ ಹೆಚ್ಚೆಂದರೆ ಜೀವ ಹೋಕೆ ಒಂದೆರಡು ತಿಂಗ ಅಷ್ಟೆ. ನೀನ್ ಅವಳನ್ನ ಇಂದೇ ಕರ್‌ಕಂಡು ತೋಟದ ಮನೆಗೆ ಯಮುನಾನ ಜತೆ ಹೋಗಿಬುಡು. ನಾವು ಇಂದ್ ರಾತ್ರಿಯೇ ವಿಮಾನಲಿ ನೆಮ್ಮದಿಂದ ಅಮೇರಿಕಾಕ್ಕೆ ಹೋದವೆ. ತೋಟ ನೋಡಿಕಣಿಕೆ ನಿನ್ನನ್ನೇ ಬುಟ್ಟವೆ." ಅಮೇರಿಕಾಕ್ಕೆ ಹೊರಡುವ ಸಡಗರಲಿ ಇದ್ದ ಸಿಂಗಪ್ಪ ದಂಪತಿಗ ಒಟ್ಟಿನಲ್ಲಿ ಅಮ್ಮನ ಉಪಚಾರದ ಜವಾಬ್ದಾರಿನ ಆದಷ್ಟು ಬೇಗನೆ ಕಳೆದುಕಂಡೊ.

"ಧಣಿಗಳೇ, ಈಗ ಇಲ್ಲಿಯೇ ದಡ್ಡರಹಳ್ಳಿಲಿ ಒಂದ್ ವೃದ್ಧಾಶ್ರಮತೇಳಿ ಹೊಸದಾಗಿ ತೆರ್‌ದೊಳೊ. ಅಲ್ಲಿ ವಯಸ್ಸಾದವರನ್ನು ಲಾಯಿಕ ನೋಡಿಕಂಡವೆ.

ಅಲ್ಲಿಯೇ ಅಜ್ಜಿನ ಸೇರಿಸಿಬಿಡೊಮೊ. ಅಲ್ಲಿ ದುಡ್ಡು ಸಹ ಕೊಟ್ಟವೆತೇಳ್ವ ವಿಷಯನ ಮಾತ್ರ ಮರೆಮಾಡಿಬುಡ್ತು. ಶುಕ್ರ, ಉಳಿದದರ ಬಗ್ಗೆ ತಿಳಿದಂಗೆ ವಿವರವಾಗಿ ವೃದ್ಧಾಶ್ರಮದ ಬಗ್ಗೆ ವಿವರಿಸಿತು.

ಎಲ್ಲದರ ಲಾಯಿಕ ಕೇಳಿಸಿಕಂಡ ಸಿಂಗಪ್ಪ ದಂಪತಿಯವು ಶುಕ್ರಂಗೆ ಒಂದ್ ಸಲಹೆನ ಕೊಟ್ವೊ. "ನೋಡ್ ಶುಕ್ರಾ ನನ್ನ ಆ ಆಶ್ರಮದ ಅಧಿಕಾರಿಗೆ ಗೊತ್ತಾದ್ರೆ ಅಲ್ಲಿ ನನ್ನ ಅಮ್ಮನ ಸೇರಿಸಿಕಣಿಕೆ ಆದ್ಲೆ. ಅದ್ ಬಡವುಕೆ, ನಿರ್ಗತಿಕರಿಗೆ ಮಾತ್ರ ಇರ್‌ದು. ನನ್ನಮ್ಮನ ನಿನ್ನಮ್ಮತೇಳಿ ಅಲ್ಲಿಗೆ ನೀನ್ ಸೇರ್‍ಸಿಬುಡು, ಲಕ್ವ ಹೊಡೆದದ್ದರಿಂದ ಅಮ್ಮನೇನ್ ಅಲ್ಲಿ ಯಾರೆಂದ್ ಬಾಯಿಬುಡಿಕಾದುಲ್ಲೆ. ನಿಂಗೂ ಲಾಭ, ನಂಗೆ ಅನುಕೂಲತೇಳಿ ಶುಕ್ರನ ಜೇಬಿಗೆ ನೂರರದ್ದು ನೋಟುಗಳನ್ನ ಸಿಂಗಪ್ಪ ದಂಪತಿಗ ತುರುಕಿದ್ದೊ.

ಈ ಅನಿರೀಕ್ಷಿತ ಕೊಡುಗೆಗಳ್‌ಂದ ಶುಕ್ರ ಒಂದೇ ಕ್ಷಣ ಗಲಿಬಿಲಿಗೊಂಡರೂ ಕಿಸೆಯಲ್ಲಿ ಹಾಕಿದ ನೋಟುಗಳನ್ನ ಶುಕ್ರ ಸಿಂಗಪ್ಪನ ಸಲಹೆನ ಪಾಲಿಸಿಕಂಡ್ ಹೇಳುತ್ತ ಇದ್ದೊ. ಆ ನೋಟುಲಿ ರಂಗಪ್ಪ ಶೆಟ್ರ ಕುಮಟ ಅಂಗಡಿಯ ಸಾಲನೆಲ್ಲಾ ತೀರಿಸಿಕಂಡ್, ಐತಾಳ ಹೋಟೆಲಲ್ಲಿ ಬಿಸಿಬಿಸಿ ಪಕೋಡ ಕಟ್ಟಿಸಿಕಂಡ್ ಬಂದ್ ಯಮುನಾಂಗೆ ಕೊಡೋಕು. ಹಂಗೆ ಆ ಸಂಜೇಲಿ ಗಡಂಗೆ ಹೋಗಿ ಒಣಗಿದ ಗಂಟಲನ್ನ ತಂಪು ಮಾಡೋಕುತೇಳುವ ಬಯಕೆಗ ಅವನಲ್ಲಿ ಉತ್ಸಾಹದ ಗರಿಕೆದರಿಸಿತ್. "ನಾನ್ ಯಮುನಾಳನ್ನ ಈಗಲೇ ಇಲ್ಲಿಗೆ ಕರ್‌ಕಂಡು ಬನ್ನೆ. ನೀವು ರಿಕ್ಷಾಲಿ ಅಜ್ಜೀನ ಕೂರ್‍ಸಿ ಸಿದ್ಧರಾಗಿದ್ದರೆ ಸಾಕ್"ತೇಳಿ ಶುಕ್ರ ಪುನಃ ಜೇಬಿಗೆ ಕೈಹಾಕಿ ನೋಟು ಕಟ್ಟುನ್ನ ಬೆರಳುಂದ ಒರೆಸಿ, ಆತ್ಮವಿಶ್ವಾಸ ಹೆಚ್ಚಿಸಿಕಂಡು ಪುನಃ ಹಾಡಿಗೆ ತಲುಪುಕಾಕನ ಒಂದೊಂದಾಗಿ ಮಳೆ ಸಿಬುರುತ್ತಾ ಇತ್ತು.

ಬಿಸಿಬಿಸಿ ಪಕೋಡನ ತಕಂಡು ನೋಟಿನ ಕಟ್ಟುಗಳನ್ನ ಯಮುನಾಂಗೆ ಕೊಟ್ಟ್ ನಾವಿಬ್ಬರು ಸದ್ಯಕ್ಕೆ ವೃದ್ಧಾಶ್ರಮಲಿ ಆಡಿಕೆ ನಾಟಕಗಳನ್ನ ವಿವರಿಸಿ ಹೇಳ್‌ಕಾಕನ ಯಮುನಾ ರಂಗು ರಂಗಾಗಿ ಹೋತ್. "ನಾವು ಬೇಗ ಸಿಂಗಪ್ಪ ಧನಿಗಳ ಮನೆಗೆ ಹೋಗೊಮೊ."ತೇಳಿ ದಾಪುಗಾಲು ಹಾಕಿಕಂಡು ಯಮುನಾ ಶುಕ್ರ ಇಬ್ಬರೂ ಸಿಂಗಪ್ಪ ಸಾಹುಕಾರನ ಮನೆಗೆ ತಲುಪುಕಾಕನ ಬೀಸಿಕಂಡಿದ್ದ ಮೇಲ್ಕೈ ಗಾಳಿಗೆ ಮಳೆನೂ ಜಾಸ್ತಿಯಾತ್. "ಸದ್ಯ ಶುಕ್ರ ಮತ್ತು ಯಮುನಾ

ಒಪ್ಪಿಕೊಂಡೊ. ನಮ್ಮ ಸಮಸ್ಯೆ ಸುಲಭಲಿ ಬಗೆ ಹರ್‍ತ್. ನಾವಿನ್ನು ನಿರಾಳ ಆಗಿ ಅಮೇರಿಕಾ ಪ್ರವಾಸಕೆ ಹೋದವೆ"ತೇಳಿ ಭಾವಿಸಿಕಂಡ್ ಸಿಂಗಪ್ಪ ದಂಪತಿ ಸೇರಿ ರಿಕ್ಷಾಲಿ ಚಳಿಂದ ಮುದುಡಿಕಂಡು ಉಸುರಾಡಿಕೆ ಒದ್ದಾಡುತ್ತಾ ಇದ್ದ ಅಮ್ಮ ಕಾವೇರಮ್ಮನ ಕೂರಿಸಿ ಖುಷಿಯಿಂದ ಗೇಟಿನ ಹತ್ರ ಶುಕ್ರ ಯಮುನಾಳ ನಿರೀಕ್ಷೆಯಲ್ಲಿ ಇರುಕಾಕನ ಅಲ್ಲಿಗೆ ಬಂದ ಯಮುನಾ ಹಿಂಗೆ ಹೇಳ್‌ತು. "ಧಣಿಗಳೇ ನಾವೇನ್ ಹೆಚ್ಚ್ ಓದಿತ್ಲೆ. ಪೇಟೆಯವರ ಮುಖನ ಕಂಡವೇ ಅಲ್ಲ. ನಾವು ಕೂಲಿ ಕೆಲಸ ಮಾಡಿಕಂಡು ಬದುಕುತ್ತಾ ಇದ್ದೊವು. ಆದ್ರೆ ನಮ್ಗೆ ಅಪ್ಪ ಅಮ್ಮ ಇಬ್ಬರೂ ಭಾರವಾಗಿತ್ಲೆ. ಇರುದರಲ್ಲೆ ಹಂಚಿಕಂಡ್ ಬದುಕುತ್ತಾ ಇದ್ದೊ. ನಿಮ್ಗೆ ನಿಮ್ಮ ಸ್ವಂತ ಅಮ್ಮನಿಗಿಂತ ಅಮೇರಿಕಾ ಪ್ರವಾಸನೇ ದೊಡ್ಡದಾಗಿತ್ ಕಂಡದೆ ಅಲಾ? ಇಷ್ಟೆಲ್ಲಾ ಶ್ರೀಮಂತರಾಗಿದ್ದುಕಂಡ್ ಸ್ವಂತ ಅಮ್ಮನ ವೃದ್ಧಾಶ್ರಮಕೆ ಸೇರಿಸಿಕೆ ನಿಮ್ಗೆ ನಾಚಿಕೆ ಇಲ್ಲೆನಾ? ನಮ್ಗೆ ದುಡ್ಡು ಕೊಟ್ಟು ನಿಮ್ಮ ಮತ್ತೆ ನಿಮ್ಮ ಅಮ್ಮನ ಬಾಂಧವ್ಯನ ಮರೆಸಿಕೆ ಆದೆ ನಿಮ್ಗೆ? ಅಮ್ಮನ ಸಾಕಿಕೆ ನಿಮ್ಗೆ ಕಷ್ಟ ಆದ್ರೆ ನಿಮ್ಮಂಥ ಹೃದಯ ಹೀನರನ್ನ ಸಾಕಿ ಬೆಳೆಸಿಕೆ ನಿಮ್ಮ ಅಮ್ಮ ಎಷ್ಟೊ ಕಷ್ಟ ಬಂದೊಳೋ ಏನೋ. ನಮ್ಗೆ ಗೊತ್ಲೆ. ನಿಮ್ಗೆ ನಿಮ್ಮಮ್ಮ ಭಾರ ಆದ್ರೆ ಹೇಳಿ, ಯಾವ ಹಣ ಬೇಡ. ನಾವೇ ನಮ್ಮ ಮನೇಲಿ ಸಾಕಿಕಂಡವೆ. ಆದ್ರೆ ಅಮೇರಿಕಾಕ್ಕೆ ಇಂಗ್ಲೆಂಡಿಗೆ ನೀವು ಹೋದರೆ ಅಲ್ಲಿ ಇರುವೊಕೆ ಲಕ್ಷ ಬಡ್ದ ನಿಮ್ಮಮ್ಮನ ನಮ್ಮಲ್ಲಿ ಸಾಕಿಕೆ ಬಿಟ್ಟ ವಿಷಯನ ತಪ್ಪಿ ಮರ್‍ತ್ ಹೇಳುದು ಬೇಡ. ಅಕಸ್ಮಾತ್ ಹೇಳಿರೆ ನಿಮ್ಮ ಮುಖಕ್ಕೆ ಅವು ಉಗ್ದು ಬುಟ್ಟಾವೆ. ನಮ್ಮ ಸಂಸ್ಕೃತಿ ನೋಡಿ ನೆಗಾಡಿಕೆ ಆದೆ. ನೀವು ಕೊಟ್ಟ ಹಣನ ವಾಪಾಸು ಕೊಟ್ಟವೆ"ತೇಳಿ ಕೈಚೀಲಲಿ ಇದ್ದ ಅವರ ಹಣನ ವಾಪಾಸ್ ಕೊಡುಕಾಕನ ಆ ಸಿಂಗಪ್ಪ ದಂಪತಿಗ ಅವಕ್ಕಾಗಿ ನಿಂತ್‌ಕಂಡ್ ಆ ಚಳೀಲಿ ಹಣೆಲಿದ್ದ ಬೆವರ ಹನಿಗಳನ್ನ ಒರೆಸಿಕೊಳ್ಳುತ್ತಾ ಇದ್ದೊ.

✍ಎಂ.ವಿ. ಮೋಹನ್ ಕುಮಾರ್

ಭದ್ರಗೊಳ ಗ್ರಾಮ ಮತ್ತು ಅಂಚೆ,
ತಾರಿಕಟ್ಟೆ, ತಿತಿಮತಿ,
ದ. ಕೊಡಗು.

# "ಮಗು ಮಾತ್ರ ನಮ್ಮದಲ್ಲ"

ಕನಸು ಕಾಣಿ... ಕನಸು ಕಾಣಿ ಅಂತ ಅಬ್ದುಲ್ ಕಲಾಮ್ ಹೇಳ್ದ ಮಾತು ಎಲ್ಲವುಕು ಗೊತ್ತುಟು. ಆದರೆ ಕಲಾಮ್ ಹೇಳ್ದ್ ನನಸಾಗೊ ಕನಸು ಕಾಣಿ ಅಂತ. ಮನುಷ್ಯ ಅಂದ ಮೇಲೆ ಸಿಹಿ ಕನಸು ಬಿದ್ದದೆ ಕಹಿ ಕನಸು ಬಿದ್ದದೆ. ಅದೇ ಮನುಷ್ಯನ ಸಹಜ ಸ್ವಭಾವ.. ಆದರೆ ಕಟ್ಟೋ ಕನಸು ಗಟ್ಟಿಯಾಗಿದ್ದರೆ ನಾಳೆ ಕಲಾಮ್ರಂತಹ ಮೋದಿಯಂತಹ ಸಮಾಜ ಸೇವೆ ಮಾಡೊ ಸಮಾಜ ಸೇವಕರು ಹುಟ್ಟಿ ಬರೊ ದೇಶ ನಮ್ಮದ್...

ಹಿಂದೊಮ್ಮೆ ನಾ ಡಿಗ್ರಿ ಓದಿಕೆ ಬೇರೆ ಊರಿಗೆ ಹೋಕಾಗಿ ಬಾತ್.. ಆದರೆ ಡಿಗ್ರಿ ಓದಿಕೆ ಮನಸಿಲ್ಲದ ನಾ... ಅಪ್ಪನ ಒತ್ತಾಯಕ್ಕೆ ಒಂದೊಳ್ಳ ಕಾಲೇಜು ಸೇರ್ದೆ.... ಆದರೆ ಓದಿಕೆ, ನಿಗ್ಗಿಕೆ ಪಿ.ಜಿ. ಯೆ ಒಳ್ಳದುತ ನೆನ್ಸಿಕೊಂಡು ಅಪ್ಪನೊಟ್ಟಿಗೆ ಪಿ.ಜಿ ಸೇರೊಕಾ ಅಂತಾ ಕೇಳ್ದೆ. ಅಪ್ಪಂದು ಒಂದೇ ಮಾತು, ಮರ್ಯಾದಿಲಿ ಹಾಸ್ಟೆಲ್ ಸೇರ್. ಎಷ್ಟೆ ಕಷ್ಟ ಆದರು ಪರ್ವಗಿಲ್ಲೆ... ಎಷ್ಟೇ ಖರ್ಚಾದರು ಬೇಜಾರಿಲ್ಲೆ ಅಂತ ಹೇಳ್ದ. ಪಿ.ಜಿ ಸೇರೊ ಒಂದು ಸಣ್ಣ ಕನಸು ಕಂಡಿದ್ದೆ ನಾ... ಅದುನು ಬೊಳ್ಳಕೆ ಹೋತ್.

ಹಾಸ್ಟೆಲ್ ಮೊದಲ ದಿನನೆ ವಿಚಿತ್ರ ಜನರ ಕಂಡೆ. ಕೆಲವುಕೆ ಪುಸ್ತಕ ಬುಟ್ಟರೆ ಬೇರೆ ಪ್ರಪಂಚನೆ ಇಲ್ಲೆ. ಇನ್ನು ಕೆಲವುಕೆ ಮೊಬೈಲ್ ಬುಟ್ಟರೆ ಅನಾಪೀಲಿಸ್ ಸೊಳ್ಳೆ... ನಮ್ಮ ರೂಮ್‌ಲಿ ಇಂತ ಗುಂಪಿಗೆ ಸೇರ್ದವ ಒಬ್ಬ ಇತ್ತ್. ಆದರೆ ಅವಂಗೆ ನನ್ನ ಕಂಡರೆ ತುಂಬಾ ಇಷ್ಟ... ಯಾಕೆ ಹೇಳ್ರೆ ನಂಗೆ ಹಾಸ್ಟೆಲ್ ಊಟ ಆದುಲೆ. ಅಂವಂಗೆ ಮೊಬೈಲ್ ಲಿ ಖರೆನ್ಸಿ ಇಲ್ಲದಿದ್ದರೆ ಆದುಲೆ... ಆದರೆ ಹಾಸ್ಟಲ್ ಲಿ ಊಟದ ಪ್ರಾಬ್ಲಂಮ್ ಏನು ಇತ್ತ್ಲೆ. ಪ್ರಾಬ್ಲಂಮ್ ಇದ್ದದ್ ನನ್ನ ಹೊಟ್ಟೆದ್.... ನಾನ್ವೆಜ್ ಇಲ್ಲದಿದ್ದರೆ ನಂಗೆ ಹಾಸ್ಟಲ್ ಊಟ ಸೇರ್ದುಲೆ. ಇದರೊಟ್ಟಿಗೆ ರೋಷನ್ ತ ಹೇಳಿ ಅವಂಗು ನನ್ನಂಗೆ ಹಾಸ್ಟೆಲ್ ಊಟ ಸ್ವಲ್ಪ ದೂರ..

ಹಿಂಗೆ ಕಾಲೇಜಿಂದ ಹಾಸ್ಟೆಲ್ಗೆ, ಹಾಸ್ಟಲ್‌ಂದ ಕಾಲೇಜಿಗೆ ಹೋತಿದ್ದ ನಾವುಗೆ ಹಾಸ್ಟೆಲ್ ಪಕ್ಕ ನಾನ್ವೆಜ್ ಹೋಟಲ್ ಉಟ್ಟುತ ಗೊತ್ತಾದ್ ಒಂದು ತಿಂಗ ಆದ್ಮೆಲೆ. ಆಮೇಲೆ ಶುರು ನೋಡಿ ಕಾಲೇಜು ಬುಟ್ಟ ಮೇಲೆ ಮೆಲ್ಲನೆ ರಮೇಶಣ್ಣನ ನಾನ್ವೆಜ್ ಹೋಟೆಲ್ಗೆ ಹೋಗಿ ಚಿಕನ್ ಟಿಕ್ಕಾ ತಿನ್ನದೆ ಹಾಸ್ಟಲ್ ಸೇರೊ ಪಂಚತಿಗೆನ

ಇಲ್ಲೆ.. ಹಿಂಗೆ ಹೋಗಿ ಹೋಗಿ ರಮೇಶಂಗೆ ನಾವು ದಿನದ ಕಷ್ಟಮರ್ ಆಗಿ ಬುಟ್ಟೊ... ಮತ್ತೆ ಸಂಡೆ ರಜೆ ಇದ್ದರೆ ಹೇಳ್ದೆ ಬೇಡ. ಸುದೀಪ್‌ನ ಯಶ್‌ನ ಫಿಲ್ಮಗೆ ಹೋಗದೆ ಇರ್ದುಲೆ..

ಒಂದು ದಿನ ಯಶ್‌ನ ರಾಜಾಹುಲಿ ಫಿಲ್ಮ ನೋಡಿಕೆ ಸಿಟಿ ಸೆಂಟರ್‌ಗೆ ನಾನು ರೋಷನ್ ಹೊರ್ಟಿದ್ದ. ಹಿಂಗೆ ಬಸ್ಲಿ ಮಂಗಳೂರಿಗೆ ಟಿಕೆಟ್ ಮಾಡಿಕನ ಪಕ್ಕದ ಸೀಟಿಲಿ ಒಂದು ಗಂಡ ಹೆಂಡತಿ ಮತ್ತೆ ಒಂದು ಮಗುನು ಇತ್ತ್.. ಬೇಸಿಗೆ ಸಮಯ ಬೇರೆ. ಆ ಮಗು ಜೋರಾಗಿ ಅಳ್ತಾ ಇತ್ತ್. ಇದರ ನೋಡಿ ರೋಷನ್ ಅಳ್ತ್ ಇದ್ದ ಮಗುನ ಇವ ತೆಕಂಡ್ ಅವನ ಕಿಸೆಲಿ ಇದ್ದ ಚಾಕಲೇಟ್‌ನ ಕೊಟ್ಟತ್.. ಸ್ವಲ್ಪ ಹೊತ್ತಿಗೆ ಆ ಮಗು ಅಳುದರ ನಿಲ್ಸಿ ನೆಗಡಿಕೆ ಶುರು ಮಾಡ್ತ್.. ಅಷ್ಟೊತ್ತಿಗಾಕನ ಬಸ್ ಸ್ಟಾಂಡ್‌ನು ಹತ್ರ ಬಾತ್. ರೋಷನ್ ಕೈಲಿದ್ದ ಮಗುನ ಅದರ ಅಮ್ಮಂಗೆ ಕೊಟ್ಟು ನಾನು ರೋಷನ್ ಸಿಟಿ ಸೆಂಟರ್ ಕಡೆಗೆ ಹೋದ.

ನಂಗೆ ಸಿಟಿ ಸೆಂಟರ್ ಒಳಗೆ ಹೋದ ಮೇಲೆ ಕಿಸೆಲಿದ್ದ ದುಡ್ಡು ಎಷ್ಟು ಉಟ್ಟು ಲೆಕ್ಕ ಹಾಕುಮನ ಅಂತ ರೋಷನ್‌ನೊಟ್ಟಿಗೆ ಕೇಳ್ದೆ. ಅವಂದ್ ಒಂದೆ ಉತ್ತರ ನನ್ನೊಟ್ಟಿಗೆ ನಯಾ ಪೈಸೆ ಇಲ್ಲೆ ತಾ ಆಕನ ನನ್ನೊಟ್ಟಿಗೆ ಎಷ್ಟು ಹಣ ಉಟ್ಟು ಅಂತ ನೋಡೊಮ ಅಂತ ಆತ್.. ರಪ್ಪ ಪ್ಯಾಂಟಿನ ಬಲಕೈಲಿ ಕಿಸೆ ಮುಟ್ಟಿಕನ ಒಂದು ರೂಪಾಯಿ ಇಲ್ಲೆ.. ಎಡ ಕಿಸೆ ನೋಡಿರೆ ಅರವತ್ತ್‌ರೂಪಾಯಿ ಇತ್ತ್... ಮುಖ ಎಲ್ಲಾ ಬೆವರಿಕೆ ಸುರು ಆಕನ ಅಂಗಿಯ ಜೇಬು ನೆನಪಾತ್.. ನೋಡಿರೆ ಒಂದು ಸಾವಿರದ ಮೂರು ನೋಟುಗ! ಖುಷಿಯೆ ಖುಷಿ..

ಮೂರು ಸಾವಿರಲಿ ನಾ ಒಂದು ಸಾವಿರದ್ದ್ ಪ್ಯಾಂಟ್ ತೆಗಂಡ್ ಉಳ್ದ ಎರಡು ಸಾವಿರನ ಕಿಸೆಲಿ ಇಟ್ಟ್ ಫಿಲ್ಮ ಟಿಕೇಟ್ ತೆಕಂಡೆ. ಹೊಟ್ಟೆ ತುಂಬಿಕೆ ಎರಡು ಪ್ಯಾಕೆಟ್ ಲೇಸ್‌ನು ಮತ್ತೆ ಕೊಕ್ಕಕೊಲನು ತೆಕಂಡ್ ಫಿಲ್ಮ ನೋಡಿಕೆ ಕುದ್ದೊ. ಫೀಲ್ಮ ಶುರು ಆಗಿ ಯಶ್‌ನ ಪಸ್ಟ್ ಡೈಲಾಗ್ ಶುರು ಆಕನ ಮಗು ಅಳುವ ಶಬ್ದ ಕೇಳ್ತ್... ರಪ್ಪ ಬಲಗಡೆ ತಿರ್ಗಿ ನೋಡಿರೆ ಬಸ್ಲಿ ಇದ್ದ ಗಂಡ ಹೆಂಡತಿ ಮಗು! ಈ ರೋಷನ್ ಸುಮ್ಮನೆ ಇದ್ದದೆನಾ ಕೈಲಿದ್ದ ಲೇಸ್ ಪ್ಯಾಕೆಟ್‌ನ ಆ ಮಗುಗೆ ಕೊಟ್ಟತ್. ಮಗು ಸುಮ್ಮನೆ ಕೂಗುದರ ನಿಲ್ಸಿತ್.. ಹಸಿವೆಲಿ ತಡೆಯದ ನಂಗೆ ಇದ್ದ ಲೇಸ್ ಪ್ಯಾಕೆಟ್‌ನ ಖಾಲಿ ಮಾಡಿ ಇಂಟರ್‍ವೆಲ್ ತನಕ ಹಂಗೆ ಕೂತೆ.

ಇಂಟರ್‌ವೆಲ್‌ಗೆ ಬುಡಿಕನ ರೋಷನ್‌ನೊಟ್ಟಿಗೆ ಸೀಟ್‌ಲೆ ಕುದುರಿಕೆ ಹೇಳಿ... ನಾ ಬೇಗ ಹೊರಗೆ ಬಂದ್ ಎರಡು ಪಪ್ಸ್ ತೆಗಂಡ್ ಒಳಗೆ ಹೋದೆ. ಫಿಲ್ಮ ಶುರು ಆಕನ ಅದೇ ಮಗು ಪುನಃ ಕೂಗಿಕೆ ಶುರು ಮಾಡ್ತ್... ಈಗ ನನ್ನ ಕೈಲಿದ್ದ ಪಪ್ಸ್ ನಾ ಬೇಗ ಕಾಲಿ ಮಾಡ್ದೆ.. ರೋಷನ್‌ನ ಕೈಲಿ ಪಪ್ಸ್ ಹಾಗೇ ಇತ್ತ್. ಮಗು ಕೂಗುದರ ನೋಡ್ದ ಅವ ಆ ಮಗುನ ಪುನಃ ತೆಕಲಿಕಾಕನ ಮಗು ಕೂಗುದರ ನಿಲ್ಲಿತ್. ಮಗು ರೋಷನ್‌ನ ನೋಡಿ ಅವನ ತೊಡೆ ಮೇಲೆ ಆಡಿಕೆ ಶುರು ಮಾಡ್ತ್. ನಗಾಡ್ತ ಇತ್ತ್. ಇವನೂ ಅದರೊಟ್ಟಿಗೆ ಆಡ್ತಾ ಇತ್ತ್.. ಹಿಂಗೆ ಫಿಲ್ಮ್ ಮುಗೆಕಾಕನ ಮಗುನ ಅದರ ಅಮ್ಮನೊಟ್ಟಿಗೆ ಕೊಡೊಮು ಅಂತ ರೋಷನ್ ಅದರ ಅಪ್ಪ-ಅಮ್ಮನ ಕಡೆ ನೋಡಿರೆ ಮಗುನ ಅಮ್ಮನು ಕಾಂಬೊದ್ಲೆ ಅಪ್ಪನು ಕಾಂಬೊದ್ಲೆ. ರಪ್ಪನೆ ರೋಷನ್ ಬೊಬ್ಬೆ ಹಾಕಿತ್. ಮಗುನ ಅಪ್ಪ ಅಮ್ಮ ಕಾಂಬೊದ್ಲೆ ಅಂತ. ನಂಗು ಸಡನ್ ಆಗಿ ಕಣ್ಣು ಕತ್ತಲೆ ಆತ್. ಇಬ್ಬರು ಹುಡಿಕಿದ.... ಹುಡಿಕಿದ ಎಲ್ಲೂ ನೋಡ್ರು ಇಲ್ಲೆ. ಯಾರ್ದೊ ಮಗು, ಇದರ ಅಪ್ಪ ಅಮ್ಮನ ಪರಿಚಯಾನು ಇಲ್ಲೆ. ಯೇನು ಮಾಡೋಕು ಅಂತ ತೋಚದೆ ಅಲ್ಲಿಂದ ಪೋಲಿಸ್ ಟೆಷನ್ಗೆ ಹೋದ.

ಟೆಷನ್‌ಲಿ ಪೋಲಿಸ್ಗ ಪ್ರಶ್ನೆ ಕೇಳಿಕೆ ಶುರು ಮಾಡ್ದ. ಮಗು ಎಲ್ಲಿ ಸಿಕ್ತು ಅಂತ? ಹೇಗೆ ಸಿಕ್ತು?.... ಈ ಪೋಲಿಸ್ ಕೇಳ್ದ ಸಾವಿರ ಪ್ರಶ್ನೆಗೆ ಉತ್ತರ ಕೊಟ್ಟರು ಅವು ನಂಬುವ ಸ್ಥಿತಿಲಿ ಇಲ್ಲೆ.. ಆಕನ ನಾ... ಫಿಲ್ಮ್ ನೋಡೊವಾಗ ಸಿಕ್ಕಿದ್ದು ಸಾರ್. "ಮಗು ಮಾತ್ರ ನಮ್ಮದಲ್ಲ" ಅಂತ ಹೇಳ್ಕನ ಎರಡು ಪೆಟ್ಟು ಇಬ್ಬರ ಕೆನ್ನೆಗೆ ರಪ್ಪನೆ ಬೀತ್. ಜೋರು ನೋವಾತ್.... ಯಾರು ಹೊಡ್ದದು ಅಂತ ನೋಡಿಕನ? ಬೆಳಿಗ್ಗಿನ ಜಾವ ಆರು ಘಂಟೆ... ಕನಸಿನ ಕನವರಿಕೆಯಲಿ ಮಂಚಂದ ಬಿದ್ದದ್ ನೆನಪಾತ್....

ಹಿಂಗೆ ಕೆಲವು ಕನಸುಗ ತಾನಗಿಯೆ ಬಿದ್ದದೆ... ಅದರಲ್ಲೂ ಈ ಕನಸ್‌ನ ಮರಿಯೋಕೆನೆ ಸಾಧ್ಯ ಇಲ್ಲೆ...

✍ಹರ್ಷಿತ್ ಎ.ಎಸ್.

ಉಜಿರೆ.

ಇ-ಮೇಲ್: harshithachrappady@gmail.com

ಮೊ : 9480901480.

(ಅನುಭವ)

# ರಜೆಲಿ ತಂದ ನಂಟ್ರಮನೆ ಖುಷಿ

ಎಪ್ರಿಲ್ ಬಾತ್‌ತ ಹೇಳಿಕಾಕನ ಎಲ್ಲ ಮಕ್ಕಳಿಗೂ ಖುಷಿ. ಹಂಗೆ ನಾ ಐದನೆ ಕ್ಲಾಸ್‌ಲಿ ಇರಿಕಾಕನ ರಜೆ ಸಿಕ್ಕಿತ್ ನಂಗೆ. ನಾ ನನ್ನ ಮಾವನ ಮನೆಗೆ ಹೊರ್ಟೆ, ಇದೇ ತರ ಎಲ್ಲ ಮಕ್ಕ ಅವರವರ ಮಾವನ ಮನೆಗೆ ಹೋದವೆ. ಹಂಗೆ ನಾ ನನ್ನ ಅಮ್ಮನೊಟ್ಟಿಗೆ ನನ್ನ ಮಾವನ ಮನೆಗೆ ಹೋದೆ. ಮನೆಗೆ ಹೋಕನ ಮಾವ ಮನೆಲಿ ಇತ್ಲೆ. ಅತ್ತೆ ಮತ್ತು ಅವರ ಮಕ್ಕ ಮಾತ್ರ ಇದ್ದೊ. ನಮ್ಮ ಸಂಸ್ಕೃತಿ ಪ್ರಕಾರ ಮನೆಗೆ ಯಾರಾರ್ ನೆಂಟ್ರ್ ಬಂದರೆ ನೀರು ಕೊಟ್ಟು ಒಳಗೆ ಕರ್ಕಂಬದು ಹಂಗೆ ನನ್ನ ಮತ್ತು ಅಮ್ಮನ ನೀರ್ ಕೊಟ್ಟು ಒಳಗೆ ಕರ್ಕಂಡೊ. ಆಗ ಅತ್ತೆನ ಕರ್ರ್ಟ ಉಷಾರೊಳರ್ರ್ಯಾತ ಕೇಳಿ ಮಾತಾಡ್ಸಿದೆ. ಮತ್ತೆ ಅಮ್ಮ ಮತ್ತು ಅತ್ತೆ ಕಷ್ಟ ಸುಖ ಮಾತಾಡಿಕಂಡ್ ಇದ್ದೊ. ಆಕನಾ ನಾ ಬಾವ ಅತ್ತಿಗೆನೊಟ್ಟಿಗೆ ಪಟ್ಟಂಗ ಹೊಡ್ಕಂಡ ಇದ್ದೊ. ಆಕನ ಮಾವ ಬಂದೊ. ಮಾವತೆಳ್ರೆ ಕೆಲವು ಮಕ್ಕಳಿಗೆ ಹೆದ್ರಿಕೆ ಇದ್ದದೆ. ಹಂಗೆ ನಂಗೆ ಕೂಡ ಚೂರ್ ಹೆದ್ರಿಕೆ ಇತ್ತ್. ಮಾವ ನನ್ನೊಟ್ಟಿಗೆ ಎನ್ಯಾತ ಕೇಳ್ದೊ. ನಾ ಒಳ್ಳೊದ್ ಮಾವತ ಹೇಳ್ದೆ. ಹಂಗೆ ಅಮ್ಮನು ಮಾವನು ಮಾತಾಡಿಕಂಡ್ ಇದ್ದೊ. ಆಕನ ಮಾವ ಹೇಳಿಕೆ ಸುರು ಮಾಡ್ದೊ. ತೋಟಲಿ ಕಮ್ಮುನ ದೈ ಕೇರಿಸಿಕೆ ಈಗ ಕಾಡ್ ಕೋಳಿಗ ತೆಕ್ಕಟೆಗ ತೋಟದ ಮೂಲೆಗೆ ಏನೋ ಬಂದವೆತ ಹೇಳಿಕೆ ಸುರು ಮಾಡ್ದೊ. ನಂಗೆ ಕಾಡ್‌ಕೋಳಿ ತೆಕ್ಕಟೆತ ಹೇಳ್ರೆ ಎಂತತೇಳಿ ಗೊತ್ತಿತ್ಲೆ. ಮಾವ ನನ್ನೊಟ್ಟಿಗೆ ಬೇಟೆಗೆ ಪೋಯ ಅಳಿಯತ ಕೇಳ್ದೊ. ನಾ ಒಪ್ಪಿಕಂಡೆ. ಹಿಂಬೊತ್ತು ಆಕನ ತೆಕ್ಕಟೆ ಕುದ್ರಿಸಿಕೆ ಹೋದೊ. ಹೆಂಗೋ ನಾನು ಒಟ್ಟಿಗೆ ತೆಕ್ಕಟೆ ಕುದ್ರಿಸಿ ಮನೆಗೆ ಬಂದೆ. ಮಾವ 8 ಗಂಟೆ ರಾತ್ರಿ ಆಕನ ಹೊಡೆಕೆ ಪೊಯಿತ ಹೇಳ್ದೊ. ಹಂಗೆ 8 ಗಂಟೆ ಆಕನ ತೆಕ್ಕಟೆ ಹೊಡೆಕೆ ಹೋದೊ. ಮಾವ ಮುಂದೆ ಹೋದೊ. ಬಾವ ನೆಡುಲಿ ಇತ್ತ್. ನಾ ಹಿಂದೆ ಇದ್ದೆ. ನಂಗೆ ಹೆದ್ರಿಕೆ ಆಗಿ ಸಾಯೋದು. ಪಿಚ್ಚರ್‌ಲಿ ನೋಡ್ದಾ ಕೊಲೆ, ಅವ್ವ ಹೇಳ್ದ ಗುಮ್ಮಜ್ಜನ ಕತೆ ಪೂರಾ ನೆನ್ಪಾತ್. ಅಷ್ಟೊತ್ತಾಕನ ನನ್ನ ಮೈ ನೀರ್‌ಲಿ ಮುಳುಗಿ ಎದ್ದವರಂಗೆ ಆಗಿತ್ತ್. ಹೆಂಗೊ ಹಿಂದೆಂದ ಪುರ್ಡಿಕಂಡ್ ಪುರ್ಡಿಕಂಡ್ ಬಲ್ಲೆ ನಡುಲಿ ಹೋಕನ ಎಡ್ಗಿ ಬಿದ್ದೆ. ಆಗ ಮಾವ ಬಿದ್ದನತ ಕೇಳ್ದೊ. ನಾ ಇಲ್ಲೆತ ಹೇಳ್ದೆ. ಮಾವ ನೆಗಡಿಕಂಡೆ ಮುಂದೆ ಹೋದೊ. ಕುದ್ರಿಸಿದ

ಒಂದು ತೆಕ್ಕಟೆಗೆ ಗುಂಡು ಹೊಡ್ದೊ. ಗುಂಡು ಹೊಡೆಕನ ನಾ ಹೇದ್ರಿ ಹಣ್ಕಿ ಬಿದ್ದೆ. ಬಾವ ನನ್ನ ನೋಡಿ ನೆಗಡಿಕಂಡ್ ಬಾಕಿ. ಇನ್ನ್ ಮುಂದೆ ಕತ್ತಲೆಗೆ ಕಾಡ್‌ಗೆ ಹೋಕಿಲೆತ ಮನ್‌ಸ್‌ಲಿ ಹೇಳಿಕಂದೆ. ಬಾವ ತೆಕ್ಕಟೆ ಹಿಡ್ಕಂತ್ ಹೆಂಗೊ ಮನೆಗೆ ಬಂದ್ ಸೆರ್ದೊ. ನಂಗೆ ಹೋದ ಜೀವ ಬಂದಂಗೆ ಆತ್. ಮತ್ತೆ ಅತ್ತೆ ಆ ಹಕ್ಕಿನ ಗೆಯ್ಪು ಮಾಡ್ದೊ. ಗೆಯ್ಪು ಮಾತ್ರ ಬಾರಿ ಲಾಯ್ಕ ಆಗಿತ್ತ್. ಉಪ್ಪನಕಾಯಿನಷ್ಟ್ ಇಕ್ಕಿದರ ನೆಕ್ಯಾಂಡ್, ನೆಕ್ಯಾಂಡ್ ತಿಂದೆ. ಕಾಡ್‌ಲಿ ಆದ ವಿಷಯನ ಮನೆಲಿ ಅಮ್ಮ, ಅತ್ತೆ, ಅತ್ತಿಗೆನವರೊಟ್ಟಿಗೆ ಹೇಳಿ ಮರ್ಯಾದೆ ತೆಗ್ದೊ. ಮತ್ತೆ ಮಿದ್ ಚೂರ್ ಹೊತ್ತು ಟಿ.ವಿ ನೋಡಿ ನಾ ಮಲ್ಗಿದೆ.

ನಂಗೆ ಬೊಳ್ಪುಗೆ 6 ಗಂಟೆಗೆ ಎಚ್ಚರಿಕೆ ಆತ್. ಎಚ್ಚರಿಕೆ ಆಕನ ಮಾವನವರಲ್ಲಿ ಇದ್ದ ಒಂದು ದೊಡ್ಡ ಹುಂಜ ಕೂಂಗ್‌ತಿತ್ತ್. ನಾ ಅಲ್ಲಿಗೆ ಒಲ್ಲಿ ಹೊದ್ ಮಲ್ಕ್ಯಾಂಡೆ. ಜ್ವರಲಿ ಎದ್ರಿಕನ 9 ಗಂಟೆ. ಎದ್ ಹಲ್ಲುಜ್ಜಿ ಬಂದ್ ನೋಡಿಕಾಕನ ಬೊಳ್ಪುಗೆ ಕೂಂಗ್‌ತಿದ್ದ ಹುಂಜ ಅಳಗೆಲಿ ಬೆಯ್ತಿತ್ತ್. ಇಡ್ಲಿನು ಕೋಳಿ ಗೆಯ್ಪುನು ತಿಂದ್ ನಾ ಮಾತ್ರೆ ಕುಡ್ದ್ ಮಲ್ಗಿದೆ. ಆಚೆ ಮನೆ ರಾಮಣ್ಣಜ್ಜ ಮಾವಂಗೆ ಫೋನ್ ಮಾಡಿ ಹಳ್ಳಕೆ ತೋಟೆ ಹಾಕಿಕೆ ಪೊಯಾತ ಕೇಳ್ದೊ. ಮಾವ ತೋಟೆ ಹಾಕಿಕೆ ಹೋಕೆ ರೆಡಿ ಮಾಡ್ತಾ ಇದ್ದೊ. ನನ್ನೊಟ್ಟಿಗೆ ಬಂದಿಯನಾತ ಕೇಳ್ದೊ. ಅತ್ತಿಗೆ ಒಳ್ಳ ನೆಗಡ್ತ್. ಅದರ ಎದ್‌ರ್ ಸಿಪಾರ್ತ್‌ಲಿ ಬನ್ನೆ ಮಾವತ ಹೇಳ್ದೆ. ಜ್ವರ ಅತ್ತ ಸಾಯಲಿತೇಳಿ ಹಳ್ಳಲಿ ಮಿಯಕಲತೇಳಿ ಹೋದೆ. ಬಾವ ಮತ್ತು ಮಾವನೊಟ್ಟಿಗೆ ನಾನು ಹೋದೆ. ನಾನೆ ಉಷಾರ್ ನನ್ನಂದ ಉಷಾರ್ ನನ್ನ ಬಾವ. ಇಬ್ಬರ್ ನೆಗಡಿಕಂಡ್ ಮಾವನ ಹಿಂದೆಕಂಡ್ ಹೋದೊ. ಮಾವನು ತಾತನು ಸೇರಿ ಹಳ್ಳಕೆ ತೋಟೆ ಹಾಕಿದೊ. ಮುಳ್ಗಿ ಮೀನ್ ತಕಂಡ್ ಬಂದ್ ಬಾವನ ಕೈಲಿ ಕೊಟ್ಟೊ, ಅವ ಹೆಂಗೋ ತಂದ್ ಚೀಲಕೆ ಹಾಕಿತ್. ನನ್ನೊಟ್ಟಿಗೆ ಅರ್ಧ ಕೆ.ಜಿ. ಆವಂತ ಮೀನ್‌ನ ತಂದ್ ಕೊಟ್ಟೊ, ಹೆದ್ರಿ ನನ್ನ ಅರ್ಧ ಜೀವ ಹೋದಂಗಾತ್. ಹೆದ್ರಿ ಮೀನ್‌ನ ಹಳ್ಳಕ್ಕೆ ಹಾಕಿದೆ. ಮಾವ ಸರಿ ಬೊಯ್ದೊ. ನಾ ಮರ್‍ಟ್ ಕಂಗಾಲಾದೆ. ಮತ್ತೆ ಸಿಕ್ಕಿದ ಮೀನ್ ತಕ್ಕಂಡ್ ಮನೆಗೆ ಬಂದೊ. ಮತ್ತೆ ಅದರ ಗೆಯ್ಪು ಮಾಡಿ ಊಟ ಮಾಡಿಕನ ಗಂಟೆ ಮೂರಾಗಿತ್ತ್. ಆಗ ನನ್ನ ಹಣೆಬರ ಹೇಳಿಕೆ ಸುರು ಮಾಡ್ದೋ. ಅರ್ಧ ಮರ್ಯಾದಿ ತೆಕ್ಕಟೆನ ವಿಷಯಲೆ ಹೋಗಿತ್ತ್. ಮೀನ್‌ನ ಕತೆ ಹೇಳಿ ಇದ್ದ ಬದ್ದ ಮರ್ಯಾದೆ ಪೂರ ತೆಗ್ದೊ. ಅದ್ಕೆ ಬಾವ ಚೂರು ಉಪ್ಪು ಖಾರ ಹಾಕಿ ಇನ್ನೂ ಜಾಸ್ತಿ ಹೇಳ್ತ್. ಹಂಗೆ ಮಾತಾಡಿಕಂಡ್ ದಿನ ಕಳ್ದೊ.

ಮಾರನೆ ದಿನ ಮಾವನ ಮನೆಲಿ ಒಂದು ಪೇರಳೆ ಮರ ಇತ್ತ್. ಅದ್ಕೆ ಉಯ್ಯಾಲೆ ಕಟ್ಟಿದೊ. ಫಸ್ಟ್‌ಗೆ ಅತ್ತಿಗೆ ಕುದ್ದತ್. ನಾನು ಬಾವನು ಉಯ್ಯಾಲೆ ಪೇರಳೆ ಮರದ ಕೊಡಿಗೆ ತಾಂಗೂವಷ್ಟ್ ಫಾಸ್ಟ್ ನೂಕ್‌ತಿದ್ದೊ. ಅತ್ತಿಗೆ ಒಳ್ಳ ಕಿರ್ಚಿ ಮರ್ಟ್ ಬುಟ್ಟತ್. ಮತ್ತೆ ಅದರ  ಇಳ್ಸಿ ನಾ ಕುದ್ದೆ. ನಾ ಕುದ್ರಿಕೆ ಪಾರ ಕಾದ್‌ಕಂಡಿದ್ದ ಉಯ್ಯಾಲೆ ಬಾವ ನೂಕಿದ ಸ್ಪೀಡ್‌ಗೆ ಉಯ್ಯಾಲೆ ತುಂಡಾಗಿ ನಾ ರೆಟ್ಟೆ ಬಿದ್ದೆ. ಒಳ್ಳ ಮರ್ಟೆ. ನೋಡ್ರೆ ಒಂದು ಕೈ ಮುರ್ದೆ ಹೋಗಿತ್. ಮಾವ ನನ್ನ ಕರ್ಕಂಡ್ ಆಸ್ಪತ್ರೆಗೆ ಹೋದೊ. ಅಲ್ಲಿ ಡಾಕ್ಟರ್ ನಂಗೆ ಇಂಜೆಕ್ಷನ್ ಕೊಟ್ಟ್ ಹೊರಿಕೆ ಬೊತ್ತದಷ್ಟ್ ದೊಡ್ಡ ಬ್ಯಾಂಡೇಜ್ ಕಟ್ಟಿ ಬುಟ್ಟೊ. ಮನೆಗೆ ಬಂದಂಗೆ ಮಾವ ಬಾವಂಗೆ ಪೊರ್ಲು ಬೊಯ್ದೊ. ನನ್ನಂದಾಗಿ ಅವ ಸುಮ್ಮನೆ ಬೊಯ್ಗೊಳ ತೀಂತ್. ಮತ್ತೆ ಅಮ್ಮ ನಂಗೆ ಬೊಯಕೆ ಸುರು ಮಾಡ್ದೊ. “ನಿಂಗೆ ಕುದ್ದಲ್ಲಿ ಕುದ್ರಿಕೆ ಆಗ್ಲೆನತೇಳಿ” ಬೊಯ್ದೊ. ಮತ್ತೆ ನಾನು ಅಮ್ಮನು ಮಾವನ ಮನೆಲಿ ಗಮ್ಮತ್ತ್ ತಿಂದೆ ಮನೆಗೆ ಹೊರ್ಟ್ ಬಂದೊ. ಬಾಕಾನ ಡಾಕ್ಟರ್‌ಕ್ಕಲೆ ಬಂದೊ. ಡಾಕ್ಟರ್ ಒಂದು ತಿಂಗ ಬ್ಯಾಂಡೇಜ್ ಹಂಗೆ ಇರೋಕುತ ಹೇಳ್ದೊ. ನಂಗೆ ಈ ಕೈನ ಕಟ್ಟಿಕಂಡ್ ಹೆಂಗೆ ರಜೆ ಕಳಿದುತ ಆಗಿತ್ತ್. ಅಮ್ಮ ಎಲ್ಲಿಗೂ ಹೋಕೆ ಬುಡ್ತಿತ್ಲೆ. ಮನೆಗೆ ಬಂದೊ. ಹೆಂಗೊ ಒಂದು ತಿಂಗ ಕಳ್ದ್ ಶಾಲೆ ಸ್ಟಾರ್ಟ್ ಆತ್. ಬ್ಯಾಂಡೇಜ್ ಬಿಚ್ಚಿದೊ. ಮಾವನ ಮನೆಲಿ ಆದರೆಲ್ಲ ಜೋಸ್ತಿಗಳೊಟ್ಟಿಗೆ ಹೇಳ್ದೆ. ಎಲ್ಲ ಒಳ್ಳ ನೆಗಡ್ದೊ.

ಎಲ್ಲವುಕ್ಕೆ ಗೊತ್ತಾತಲ ನನ್ನ ನೆಂಟ್ರ ಮನೆನ ಖುಷಿ ಹೆಂಗಿತ್ತ್‌ತ ಹೇಳಿ ಪಾಠದ ಕಡೆಗೆ ಗಮನ ಕೊಟ್ಟೆ.

✍ರಕ್ಷಿತ್ ಕೆ.ಎ.

S/o ಆನಂದ ಗೌಡ

ಕುದ್ಕುಳಿ (ಅಜ್ಜಿಕಲ್ಲು) ಮನೆ,

ಮರ್ಕಂಜ ಗ್ರಾಮ, ಸುಳ್ಯ ತಾಲೂಕು.

ಮೊ : 9449783507, 9980385719

## (ಕವನ ಜೊಂಪೆ)

# ಕಲ್ತ್ ಹೈದ?

ಗೂಡೆ ಬೇಕು ನಂದರಬೊಳಿ ಕಲ್ತ್ ಹೈದಂಗೆ.
ಮೋರೆ ಬೇಕು ನೋಡ್ಕನ ಚಂದ್ರ ದೇವ್ರಾಂಗೆ.
ಎತ್ತರ ತೋರ ನೋಡ್ಕನ ಬಾರಿಲಾಯಿಕ್ ಬೇಕು.
ಕೂದಲ್ ಬುಟ್ಟರೆ ಮೊಣ್ಕಾಲ್‌ವರೆಗೆ ಇಳ್ದ್ ಬರೋಕು.
ಹೊಳೆವ ಮೈ ಇರೊಕು ನೋಡಿ ಪವನ್ ಚಿನ್ನದಾಂಗೆ.
ಮೂಂಗ್ ನೋಡ್ರೆ ಕಂಡ್ ಬರೊಕು ಗಿಣಿಕೊಕ್ಕ್‌ನಾಂಗೆ.
ಕೋಸ್ ಕಣ್ಣ್ ಕಂಡ್ ಬಂದರೆ ಒಪ್ಪಿಗೆ ಆಕಿಲ್ಲೆ
ಏಡೆಮೇಡೆ ಹಲ್ಲ್ ಇದ್ದರೆ ಹಕ್ಕೆಲೆ ಬಾಕಿಲ್ಲೆ.
ನಮ್ಮ ಬೊಳಿಗೆ ಕೂಡಿ ಬಂದದೆ ಹೆಮ್ಮನ ಬೊಳಿ.
ಒಪ್ಪಿಕಿಲ್ಲೆ ಕಂಡ್ ಬಂದರೆ ಗುಂಡಾರ ಬೊಳಿ.
ಕಲೆಕು ಗೂಡೆ ಹೆಸ್ರ್ ಪಡ್ದ ಕಾನ್ವೆಂಟ್ ಸಾಲೆಲಿ.
ಬಾಯಿ ಬುಟ್ಟು ಮಾತಾಡೋಕು ಇಂಗ್ಲೀಷ್ ಬಾಸೆಲಿ.
ಒಪ್ಪಿಗಾದರೆ ಕೊಡೊಕು ನೀವು ಬರಿ ಹತ್ ಲಕ್ಷನ.
ಇರೊಕು ಮೈಲಿ ತೂಗಿ ನೋಡ್ರೆ ಅರ್ದ ಕೆ.ಜಿ ಚಿನ್ನ
ಗೂಡೆ ನೋಡ್ಕೆ ನಿಗಂಟ್ ಆತ್ ಸ್ಟಾರ್ ಹೊಟ್ಲಿಲಿ
ನಂಟ್ರ್ ಇಸ್ಟ್‌ರ್ ಒಟ್ಟಿಗೆ ಬರೊಕು ಸಪಾರಿ ಸೂಟಿಲಿ.
ಕೇಳ್ದ್ ಹೈದ ತಿರ್ಗಾಡಿಕೆ ಹೊಸ ಬೆಂಜ್‌ಕಾರ್‌ನ.
ಕೊಡೊಕು ನೀವು ಅದರೊಟ್ಟಿಗೆ ಮಾಳಿಗೆ ಮನೆನ.
ಗೂಡೆ ನೋಡ್ಕೆ ಹೈದ ಬಾತ್ ಅಶೋಕ ಹೊಟ್ಲಿಗೆ.
ನಂಟ್ರ್ ಗಿಂಟ್ರ್ ಸೇರ್ದ್ದೊ ಅಲ್ಲಿ ಎದ್ರ್ ಬದ್ರಿಗೆ
ಇಚಾರ್ಸಿದೊ ನಮ್ಮ ಹುಡ್ಗ ಕಲ್ತ್ ವಿದ್ಯೆ ಡಿಗ್ರಿನ.
ಉಗ್ಗುತುಟ್ಟು ನಮ್ಮ ಹೈದ ತಡ್ದ್ ತಡ್ದ್ ಹೇಳ್ಕನ.
ಕೆಬಿಲಿ ಇಸಿಟು ಅಂವ ಹೊಳೆವ ಇಯರ್ ಫೋನ್‌ನ.
ಕೋಟು ಹಾಕಿಟು ಕಪ್ಪು ಬಣ್ಣದ ಮೋದಿ ಸ್ಟೈಲಿನ.
ಗುಬ್ಬಿ ಹಾಕಿಟು ಕಾಗಡೆ ಮೇಗಡೆ ಎದ್ರ್‌ಂದ ನೋಡ್ಕನ.
ತಲೆ ಆಡ್ಸಿ ಗೂಡೆ ಹೇಳ್ತ್ ನಂಗೆ ಒಪ್ಪಿಗೆ ಇಲ್ಲೆ.
ತಲೆ ಬೊಗ್ಗಿ ಹುಡ್ಗ ಕುದ್ದತ್ ನೆನ್ಸಿದಾಂಗೆ ಆತಿಲ್ಲೆ.
ಹುಡ್ಗಂಗಾತ್ ಸೋತ್ ಹೋದೆ ಗೂಡೆ ಎದ್ರ್‌ಲಿ
ಕಣ್ಣ್ ಬುಟ್ಟ್ ನೋಡ್‌ತಿತ್ತ್ ಹೊಟ್ಲು ಕಿಡ್ಕಿ ಸೆರೆಲಿ.

✍'ವ್ಯಾಸ'

# ನಮ್ಮ ಬಾಸೆ ನಮ್ಮದ್

ಅರೆಬಾಸೆಂತ್ತೇಳಿ
ಅರೆಗನ್ನಡಂತೇಳಿ
ಎರಡರ ಮೊದಲಕ್ಷರ
ಕನ್ನಡ ಅಕ್ಷರ ಮಾಲೆನ
ಮೊದಲಕ್ಷರ ತಾನೇ?

ತಾನಿ ತಾನಿಂತ ಮನೆಲೆಲ್ಲಾ
ಬಿದ್ದೆದ್ದ್ ನಡೆಕನ
ಕಲ್ತಂತ ಬಾಸೆ ತಾನೇ?

ಅವ್ವನ ತೊಡೆಮೇಲೆ
ಬೆಚ್ಚಂಗೆ ಕುದ್ದಿದ್ದ್
ಅಪ್ಪನ ಹೆಗ್ಲೇರಿ
ಕೊಣ್‌ಕಂಡ್ ಇದ್ದ್
ಕಲ್ತಂತ ಬಾಸೆ ತಾನೇ?

ನಮ್ಮ ಬಾಸೆ ಮೇಲೆ
ನಮಿಗಭಿಮಾನ ಇಲ್ಲರೆ
ನಮ್ಮಪ್ಪ ಅವ್ವನ ಪೂರಾ
ಮರ್ತಂಗೆ ತಾನೇ?

ಮನ್ಸಿಟ್ಟ್ ಕಲ್ತರೆ
ಅಳ್‌ಕದೆ ಬಳ್ಸಿರೆ
ಶಾರದಾಂಬೆಗೆ ನಮ್ಮ
ನುಡಿ ಸೇವೆ ತಾನೇ?
ನಮ್ಮ ಬಾಸೆಯಿದ್
ಕನ್ನಡದ ಉಪ ಬಾಸೆ ತಾನೇ?

✍ಕುಲ್ಲಚನ ಕಾರ್ಯಪ್ಪ

ಕುಂಬಳದಾಳು ಗ್ರಾಮ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

# ಹನಿಗವನ

## ಆಸೆ

ಓ ಗೌಡ ಜನಾಂಗದ ಕೂಸೆ
ನಂಗೆ ಒಂದೇ ಒಂದು ಆಸೆ
ಎಲ್ಲಿದ್ದರೂ ಮರೆಯಾಕಾಗದ್ ನೀ
ಈ ನಮ್ಮ ಅರೆ ಭಾಸೆ

## ಹೆದ್ರಿಕೆ

ಅಂದ್ ಹತ್ತುದುತ್ತೇಳ್ರೆ ವೇದಿಕೆ
ನಂಗಿತ್ ಬಾರಿ ಹೆದ್ರಿಕೆ
ಯಾಕೆಂತೇಳ್ರೆ ಬಾತೇ ಇತ್ಲೆ
ನಂಗೆ ಅರೆಭಾಸೆ ಓದಿಕೆ

✍ಬೈಲೆರ ಭಾನು ಅಶೋಕ್

ಬಿಳಿಗೇರಿ ಗ್ರಾಮ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

ಓದಿರೆ ಓದಿದ್ಕ್ಕಿಂತ ಓದಿಕ್ಕಿದ್ದದೆ
ಬರ್ದರೆ ಬರ್ದದ್ಕ್ಕಿಂತ ಬರೆಕಿದ್ದದೆ
ಆದರೆ
ಓದುವ, ಬರೆವ ಮನ್ಸ್ ಮುಖ್ಯ.

# ಮಳೆಗಾಲಲಿ

ಆಟಿ ತಿಂಗದ ಕಾರಿರುಳ್‌ಲಿ
ಮಳೆರಾಯನ ಆರ್ಭಟಲಿ
ವಾಯು–ವರುಣರ ನರ್ತನ ನಡ್ದಿತ್ತ್
ರುದ್ರ ಭೀಕರ ನರ್ತನ ನಡ್ದಿತ್ತ್ ॥

ಬರೆ ಜರಿತ ಮನೆ ಕುಸಿತ
ಮರ ಬಿದ್ದ್ ಲೈಟ್ ಕಂಬಗ ಬಿದ್ದಿದ್ದೊ
ಅಮವಾಸ್ಯೆನ ಕತ್ತಲೆಲಿ
ಜನ ಬೆಳಕ್ ಕಾಣದೆ ಕುದ್ದಿದ್ದೊ ॥

ಹೊಳೆ ತೋಡುಗ ಉಕ್ಕಿ ಹರ್ದಿದ್ದೊ
ಜಲಪಾತಗ ಭೋರ್ಗರೆದಿದ್ದೊ
ಇಲ್ಲಿದ್ದವು ಚಳಿಗಾಳಿಗೆ ಮುದುರಿ ಹೋಗಿದ್ದೊ
ಹೊರಗಿನವು ನೀರ್ ನೋಡಿಕೆ ಬಂದಿದ್ದೊ ॥

ಆದರೂ, ಮರ ಕೆಸದ ಪಲ್ಯ ಪತ್ರೊಡೆ
ಆಟಿ ಸೊಪ್ಪಿನ ಪಾಯ್ಸ ಎಲ್ಲಾ ಕಡೆ
ಬಾಣೆಲಿ ಗದ್ದೆ ಪುಣಿಲಿ ಅಳಂಬುಗ ಎದ್ದಿದ್ದೊ
ಬಾಯಿಲಿ ನೀರ್ ತರ್ಸಿದ್ದೊ ॥

ಎಸಂಡ್ ಗೈಪು ಬೆಳ್ತಕ್ಕಿ ಅನ್ನ
ಕಣಲೆ ಗೈಪು ಅಕ್ಕಿ ರೊಟ್ಟಿ
ಹಲಸಿನಕ್ಕಿ ಪಜ್ಜಿ ಮೊಕ್ಕಳ ರೊಟ್ಟಿ
ತಿಂಬಕೆ ಮಜಾ ತಂದಿದ್ದೊ॥

ಒಲೆ ಬುಡಲಿ ಕುದ್ದ್ ಬೆಂಕಿ ಕಾಯ್ಸಿಕಂಡ್
ಬೆಲ್ಲದ ಕರಿ ಕಾಫಿನ ಕುಡ್ಕಂಡ್
ಬೆಲ್ಲ ಗೆಣ್ಸ್‌ನ ಬಿಸಿ ಬೂದಿಲಿ ಮುಚ್ಚಿ
ಸುಟ್ಟು ತಿಂದ ಅಂದ್‌ನ ಗ್ಯಾನ ತರ್ಸಿದ್ದೊ॥

ಹೊಳೆ ತೋಡು ಉಕ್ಕಿ ಬಾಕನ
ಗದ್ದೆಗೆ ಮೀನ್ ಹತ್ತ್‌ಕನ
ಕೂಳಿ ತುಂಬಾ ಬಿದ್ದ ಮೀನ್‌ನ
ಗೈಪು ಮಾಡಿ ಮಜಾಲಿ ತಿಂದಿದ್ದೊ ॥

ಹಲಸಿನಕ್ಕಿನ ಹೊರ್ದ್ ಕುಟ್ಟಿ
ಜೇನ್ ಕಾಯಿತುರಿ ಹಾಕಂಡ್ ತಿಂದ ಗ್ಯಾನ
ಹೊತ್ತಾರೆ ಎದ್ದ್ ಕಾಡ್ ಮಾವ್‌ನ ಮರದಡಿಲಿ
ಬಿದ್ದ ಹಣ್ಣ್‌ನ ಹೆರ್ಕಿಕೆ ಹೋದ ಗ್ಯಾನ ॥

ಹೆಣ್ಮಕ್ಕ ಗದ್ದೆಲಿ ಅಗೆ ತೆಗಿಯಕನ ಹೇಳ್ವ ಪದ
ಹೂಡ್ವ ರೈತನ ಹರಹರಾ ಹೀ ತೇಳ್ವಪದ
ಕೆಮಿಗೆ ಕೇಳಿಕೆ ಬಾಳಾ ತಂಪು
ಅದೇ ಹೊತ್ತಾರೆನ ಸುಪ್ರಭಾತದ ಇಂಪು ॥

ಮಳೆಗಾಳಿನ ದಿನಲಿ ಬೆಚ್ಚಂಗೆ ಮಾಡಿಕೆ
ಬೇಕ್ ಬತ್ತ ಸಾರಾಯಿ ವಿಸ್ಕಿ ಬ್ರಾಂಡಿ ಕುಡಿಯಕೆ
ಹಿಂಗೇ ಕಷ್ಟ–ಸುಖಲಿ ಮಳೆಗಾಲ ಕಳ್ದಿತ್ತ್
ಮೂಡ್ ದಿಕ್ಕ್‌ಲಿ ಸೂರ್ಯ ಹೊಂಬೆಳಕ್ ಮೂಡ್ಸಿತ್ತ್ ॥

✍ಕಟ್ರತನ ಲಲಿತಾ ಅಯ್ಯಣ್ಣ

ಗೌಳಿಬೀದಿ, ಮಡಿಕೇರಿ,
ಕೊಡಗು ಜಿಲ್ಲೆ.

ಕೃಸಿ ಗೀತೆ

## ನಾಟಿ ಕೂಡ್ಸ್‌ಕನ ಹೇಳ್‌ವ ಹೊಯ್ಯ ಪದ

ದೇವರ ಗದ್ದೇ....ಲಿ ಜೋಡೆತ್ತ್ ಕಟ್ಟಿ
ನೇಗಲ್ ಉಳ್‌ಮೆಲಿ ಬೆಳ್‌ದಂತ ಅಗೆನಾ
ಗಣೋದಿ ಗದ್ದೆಲಿ ಕೊಡಿನಾಟಿ ಕಂಬಳ
ಓ ಹೊಯ್ಯ ಓಹೋ ಹೊಯ್ಯಾ॥

ಕಳಿ ಕಳಿ ನಾಟಿ ಕಾವೇರಮ್ಮಂಗೆ
ಕಳಿ ಕಳಿ ನಾಟಿ ಇಗ್ಗುತಪ್ಪಂಗೆ
ಇಗ್ಗುತಪ್ಪನ ಬೆಟ್ಟದ ಹಾಂಗೆ....
ಓ ಹೊಯ್ಯ ಓಹೋ ಹೊಯ್ಯಾ॥

ಇಗ್ಗುತಪ್ಪನ ಬೆಟ್ಟದ ಹಾಂಗೆ
ಕಾವೇರಮ್ಮನ ಮನ್ಸ್‌ನ ಹಾಂಗೆ
ಏರಿಗೂ ಬಾರಿಗೂ ಮುಟ್ಟಿ ಬೆಳೆಯಲಿ
ಓ ಹೊಯ್ಯಾ ಓಹೋ ಹೊಯ್ಯಾ॥

ಬಾಲಾಡ್‌ಚಂಬೆ ಹಕ್ಕಿ ಹಾರಾಡಿಕುದ್ದ್
ಬೆಳ್‌ದಂತ ಗದ್ದೇ...ಲಿ ಕದ್‌ರ್ ತೆನೆತುಂಬಿ
ಬೆಳ್‌ದಂತ ಬೆಳೆನ, ಹಲ್‌ಕತ್ತಿಲಿ ಕೊಯ್ದ್
ಓ ಹೊಯ್ಯಾ ಓಹೋ ಹೊಯ್ಯಾ॥

ಕೊಯ್‌ದಂತ ಬೆಳೆನ ಅರ್‌ಕಟ್ಟ್ ಬಳ್ಳಿಲಿ
ಹೊರೆಕಟ್ಟಿ ತಂದ್ ಒಕ್ಕುಲು ಕಳಲಿ
ಪೊಲಿ ಪೊಲಿ ಹೇಳ್ಕಂಡ್ ಭೇಟಿನ ಸುತ್ತು
ಓ ಹೊಯ್ಯಾ ಓಹೋ ಹೊಯ್ಯಾ॥

ಹುಲ್ಲುನ ಮುಡಿಸುತ್ತಿ ಮೂಟೇನೆ ಕಟ್ಟಿ
ಬೀಜನ ಹಾಕಿಕೆ ಸಮಯನೆ ಬಾಕನ
ಮುಡಿಂದ ತೆಗ್ದ್ ನೀರ್‌ಲಿ ಹಾಕಿ
ಓ ಹೊಯ್ಯ ಓಹೋ ಹೊಯ್ಯಾ॥

ಮುಳ್‌ಗಿದ ಭತ್ತನ ತಳಲೆ ಬುಟ್ಟ್
ಮೊಳ್‌ಕೆ ಕಾಳ್‌ನ ಕುಕ್ಕೆಲಿ ತುಂಬಿ
ದೇವರ ಬನಕಾಗಿ ಅಣ್ಣ ತಮ್ಮಂದ್ರ್
ಓ ಹೊಯ್ಯ ಓಹೋ ಹೊಯ್ಯಾ॥

ಮುಂಜಾನೆ ಮೂಡು ಬೆಳ್‌ಕ್‌ಲೆ
ಹೊತ್ತ್‌ತಂದ್ ದೇವರ ಗದ್ದೆ| ಅಣ್ಣ ತಮ್ಮರ್
ಬಿತ್ತಿದ್ದೊ ಕಾಳ್‌ನ ಕೈಲಿ ತುಂಬಿ
ಓ ಹೊಯ್ಯಾ ಓಹೋ ಹೊಯ್ಯಾ॥

✍ಬೈತಡ್ಕ ಜಾನಕಿ ಬೆಳ್ಯಪ್ಪ

21–16 ರೇಸ್‌ಕೋರ್ಸ್ ರಸ್ತೆ,
ಎಲ್.ಐ.ಸಿ. ಕಛೇರಿ ಹತ್ತಿರ,
ಮಡಿಕೇರಿ.
ಮೊ : 9008571899.

# ಬಂದೊಮ್ಮೆ ನೋಡ್.....

ಬಂದೊಮ್ಮೆ ನೋಡ್ ನೀ ನನ್ನೂರ್‌ನ ನಿನ್ನ ತವುರೂರ್‌ನ
ಮುಂಗಾರ್ ಮಳೆ ಪೊರ್ಲುರ್ ನನ್ನೂರ್‌ಲಿ
ಮಳೆಗಾಲ ಮಳೆ ಪೊರ್ಲುರ್ ತವುರೂರ್‌ಲಿ
ಇಂದಲ್ಲ, ಮುಂದೆಂಗೊ ಗೊತ್ತ್‌ಲೆ ನಮಿಗೆ
ಬಂದೊಮ್ಮೆ.......

ಆಕಾಶ 'ಜಲಪಾಲ' ಯಾಕಾತೊ ಅಂದ್?
ಬೆಟ್ಟ ಗುಡ್ಡೆ ಹೊಟ್ಟಿ ಹೊಳೆಲೆಲ್ಲ ರಣ ನೀರ್
ಆಸೆ ಬದ್ಕೆಲ್ಲ ಕೆಂಪಾಗಿ ಹರ್ತ್
ಬಂದೊಮ್ಮೆ......



ಕತ್ತಲಾದರೆ ಸಾಕ್ ಹೆಂಗುಟ್ಟೊ ಬೊಳ್ಪು
ಹೊತ್ತ್ ಹೊತ್ತ್‌ನ ತುತ್ತು ಇಲ್ಲದೆ ಗೋಳು
ಮಣ್ಣಾಗಿ ಹೋತು ಊರವರ ಬಾಳ್
ಬಂದೊಮ್ಮೆ......

ಗುಡುಗು ಬಂದರೂ ಸಾಕ್, ಎದೆ ನಡ್ಗಿಹೋದೆ
ಮಳೆ ಸೊರ್ದರೂ ಸಾಕ್, ನಿಲ್ಲೊಮ್ಮೆತ್ತೇಳಿವೆ
ಇನ್ನೂ ಮಳೆ ಉಟ್ಟುತ್ತೇಳಿರೆ, ಸಳಿ ಕುದ್ದಂಗಾದೆ
ಬಂದೊಮ್ಮೆ.....

ಊರ್ ಊರ್‌ನ ಜನ ಊರೊಳಗೆ ಇಲ್ಲೆ
ಊರೊಳಗೆ ಹೋದರೆ ಸೂರಂತೂ ಇಲ್ಲೆ
ನನ್ನ ಊರ್‌ನ ಇಂದ್ ಕೊಂಡಾಡವಿಲ್ಲೆ
ಬಂದೊಮ್ಮೆ....

ಬೆಟ್ಟ ಗುಡ್ಡೆಯೆಲ್ಲ ರಕ್ಕಸ ಯಾಕಾತ್?
ಹಳ್ಳ ಕೊಳ್ಳ ಪೂರ ಹೆಣ ಹರ್ದ್ ಹೋತ್
ನಂಬಿಕಾಗದ ಸತ್ಯ ಕಂಹಿಯಾಗಿ ಆತ್
ಬಂದೊಮ್ಮೆ......

✍ಬಾರಿಯಂಡ ಜೋಯಪ್ಪ.

# ಅವ್ವನ ನೆಂಪು

ಇನ್ನೊಮ್ಮೆ ಹುಟ್ಟಿ ಬಂದ್ ನಿನ್ನ ತೊಡೆ ಮೇಲೆ।
ಮಲಗುವಾಸೆ ನಂಗ್ಯಾಕೊ ಆದೆ ಅವ್ವಾ...॥
ನಂಗೆ ಇಂದ್ ನಿನ್ನ ನೆನಪಾದಲೇ...।
ಅವ್ವಾ... ಅವ್ವಾ.. ಅವ್ವಾ॥
ಇಂದಿಗೆ ಕಣ್ಣೀರ್ ಇಳ್ದದೇ....।
ಅವ್ವಾ... ಅವ್ವಾ.....

ಅವ್ವಾ ನಿನ್ನೆಂದ ಗ್ಯಾನಾ ಆಗುಟೂ...।
ಪ್ರೀತಿಂತಾ ಹೇಳ್‌ವಾ ಆ ಮಾತ್‌ನಾ॥
ನೀ ಆಗ್ಯೋಳಾ ಈ ಲೋಕಲಿ ।
ಪ್ರೀತಿ ತುಂಬಿದಾ ಆ ಸಾಗರ ॥
ಮನಸೋಯಿಚ್ಚೆ ನೆಲೆ ಕಾಯುವಾ।
ಜೀವನಾ ಕೊಟ್ಟ ಆ ಅವ್ವನಾ...॥
ಅಮೃತಾದಂತಾ ನಿನ್ನ ಎದೆ ಹಾಲಿಗೆ।
ಅದ್ಕೆ ಬೆಲೆ ಕಟ್ಟಿಕೆ ಸಾಧ್ಯನಾ....

ನಾವು ಸಣ್ಣೋವು ದೊಡ್ಡೋವು ಆಕನಾ।
ಅವ್ವನ ನೆರಳಿಲಿ ಬೆಳ್ದವೆ ॥
ಮತ್ತೇ ನಮ್ಮದೇ ಮನೆ ಆಕನಾ।
ಅವ್ವನಾ ಪ್ರೀತಿನಾ ಮರ್ತವೇ॥
ಮಕ್ಕ ಅವರ ಕೈ ಬುಟ್ಟರೂನೂ।
ದುಃಖ ಮನ್ಸಿಗೆ ಕೊಟ್ಟರೂನೂ॥
ಅವ್ವನ ಕರ್‌ಳ್ ನನ್ನದೇ ಮಕ್ಕಳ್।
ಅಂತಾ ನೆನ್ಸಿಯಾ ನೀ ಯಾಗೋಳೂ....॥
ಅವ್ವಾ....॥ ಅವ್ವಾ॥.... ಅವ್ವಾ.....

✍ಎಸ್. ಶೀಲಾವತಿ

W/o ಸೀತರಾಮ ಗೌಡ
'ಸ್ಪಂದನ'
3ನೇ ವಾರ್ಡ್, 238/2
ಬ್ರಾಹ್ಮಣರ ಹಾಸ್ಟಲ್ ಬಳಿ,
ಜೆ.ಸಿ. ರೋಡ್, ಸುಳ್ಯ.

# ಅವ್ವ... ನಿನ್ನ ನೆಂಪಾದೆ ನಂಗೆ

ಅವ್ವ... ನಿನ್ನ ನೆಂಪಾದೆ; ಯಾಗೋಳು ನಂಗೆ।
ಇಂದ್ ನೀ ಇರಕಿತ್ತ್; ನಮ್ಮೊಟ್ಟಿಗೆ ಹಾಂಗೆ॥
ಅಂದ್ ಉಂಬಕ್ಕೆ ಬರಗಾಲ; ಇತ್ತ್ ನಾವ್ಗೆ।
ಆದರೂ ನೀ ಹೊಟ್ಟೆ ಕಟ್ಟಿ; ಕೊಡ್ತಿದ್ದ ಹುಗ್ಗೆ।
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಮಲ್ಗಿಕೆ ಮೊಂದ್ರಿಲ್ಲೆ; ಹೊದಿಯಕ್ಕೆ ಒಲ್ಲಿಲ್ಲೆ।
ಗೋಣಿನ ಅಡಿಗ್ಯಾಕಿ; ಹರ್ದ ಸೀರೆನ ಹೊದಿಸ್ತಿದ್ದೆ॥
ನೀ ಉಟ್ಟ ಸೀರೇನನೆ; ಮುಸುಕಾಕಿ ಮಲಗ್ತಿದ್ದ......
ನಿನ್ನ ತೋಳಿನ ಆಸರೆ; ನಾವ್ಗಿತ್ತ್ ಅವ್ವ॥
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಶಾಲೆಗೆ ಹೋಕನ ಬಾಳೇಲಿ; ಬುತ್ತಿ ಕಟ್ತಿದ್ದ।
ಕುಂಡೆ ಹರ್ದ ಚಡ್ಡಿನ; ಹೊಲ್ದು ನೀ ಕೊಡ್ತಿದ್ದ॥
ಉದ್ದ ಕೈ ಚೀಲನ; ಗಂಟ್ ಹಾಕಿ ಕೊಡ್ತಿದ್ದ।
ತಲೆ ಕೂದಲು ಬಾಚಿ; ನೆಗಡಿ ತೆಗದ್ ಕಳ್ಸ್ತಿದ್ದ।
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಅಪ್ಪ ಹೊಡ್ದ ಪೆಟ್ಟಿಗೆ; ಎಣ್ಣೆ ಕಾಸಿ ಹಾಕ್ತಿದ್ದ।
ಮರ್ಡುವ ಮೋರೆಂದ; ಕಣ್ಣ್ ನೀರ್ ಒರ್ಸ್ತಿದ್ದ॥
ಅಮುಲ್ ಡಬ್ಬಿಂದ ಸಕ್ರೆ ತೆಗ್ದ್; ಬಾಯಿಗೆ ಹಾಕಿ ಕಳ್ಸ್ತಿದ್ದ
ಸುಮ್ಮನಿರ್ ನನ್ನ ಮಜ; ಜಾಣ ಕೂಸುಂತ ಹೇಳ್ತಿದ್ದ
ಅವ್ವ ನಿನ್ನ ನೆಂಪಾದೆ ಯಾಗೋಳು ನಂಗೆ॥

ಶಾಲೆಂದ ಬಂದಾಕನ ಹಪ್ಪಳ; ಚಾಯ್ ಕೊಡ್ತಿದ್ದ।
ಕೋಳಿಗಳ ಬುಟ್ಟ್, ಗದ್ದೆ ಹಕ್ಕಲೆ, ಪಾರಕೆ ಹೋಗು ಅಂತಿದ್ದ॥
ಮೀಯಕೋಕನ ನೀರಡಲಿ; ಕಾಯಿ ಚೊಪ್ಪುಲಿ ಒರ್ಸಿತ್ತಿದ್ದ।
ಮೀದ್ ಆಗಿ ಕೋಮಣ ಕಟ್ಟಿ; ಬುದ್ಧಿ ಹೇಳಿ ಕಳ್ಸ್ತಿದ್ದ॥
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಕತ್ತಿ–ಕೊಟ್ಟುಲಿ ಕೆಲ್ಸ ಮಾಡಿಕನ; ಜಾಗೃತೆ ಮಜ ಅಂತಿದ್ದ।
ಮರ ಹತ್ತಿ ಇಳಿಕಾಕನ; ಗಟ್ಟಿ ಮಜಂತ ಹೇಳ್ದಿದ್ದ॥
ಸೊಪ್ಪು–ಸೌದೆ ಹೊರಿಕಾಕನ; ಮೆಲ್ಲ ಮಜಂತೇಳ್ತಿದ್ದ।
ಕೈ–ಕೊಯ್ದಿ ಹೊಡೆಕಾಕನ; ನನ್ನೊಟ್ಟಿಗೆ ನೀ ಇರ್ದಿದ್ದ॥
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಗಡ್ಡ ಮೀಸೆ ಬಾಕ್ಯಾಕನ; ಮೋರೆ ನೋಡಿ ನಗ್ತಿದ್ದ।
ನನ್ನ ಮಜ ಬೆಳ್ದುಟ್ಟೊಂತ; ಎಲ್ಲರೊಟ್ಟಿಗೆ ಹೇಳ್ತಿದ್ದ॥
ಕಲ್ತ್ ಕೆಲ್ಸ ಸಿಕ್ಕ್‌ಕಾಕನ; ಬಾರೀ ಕುಷಿಪಟ್ಟಿದ್ದ॥
ಮಜಂಗೆ ಮದುವೆ ಮಾಡ್ನೋಕುಂತ; ಎಲ್ಲವರೊಟ್ಟಿಗೆ ಹೇಳ್ತಿದ್ದ॥
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

ಉಂಬಕೆ, ತಿಂಬಕೆ; ಈಗ ಅಟ್ಟಾಡಿ ಉಟ್ಟವ್ವ
ಮಲ್ಗಿಕೆ ಕಟ್ಲ್–ಮಾಳಿಗೆ ಮನೆ ಉಟ್ಟವ್ವ॥
ತಿರ್ಗಿಕೆ ಕಾರ್–ಬೈಕ್; ನನ್ನ ಮನೆಲಿ ಉಟ್ಟವ್ವ
ಇಂದ್ ನೀ ಇರಕಿತ್ತ್; ನಮ್ಮೊಟ್ಟಿಗೆ ಅವ್ವ॥
ಅವ್ವ ನಿನ್ನ ನೆಂಪಾದೆ; ಯಾಗೋಳು ನಂಗೆ॥

✍ಭವಾನಿಶಂಕರ ಅಡ್ತಲೆ
ಮೊ : 9448818181

# ಅಮ್ಮಾ ನಿಂಗಾಗಿ

ನೆನಪಾಗಿ ಕಾದದೆ ಬಾಲ್ಯ
ಅಮ್ಮನ ಮಮತೆಯ ಮಡಿಲು
ಲೋಕಕೆ ದರ್ಶನ ಅಮೂಲ್ಯವಾದಂಗೆ
ಅಮ್ಮಾ ಎಂಬ ಪದದಲಿ ತುಂಬಿದೆ ಕರುಣೆ

ಬಿಡಿಕಾದುಲೆ ಎಂದಿಗೂ
ನಾ ಸತ್ರೆ ಮರಣ
ಎರಡಕ್ಷರದ ಗುಣ
ತೀರಿದೆಂದೂ ಋಣ
ಮಾತೆಯ ಕೈಗುಣ
ಬಾಳ ದೀವಿಗೆಯ ಹೂ ಆದೆ...

ಅಮ್ಮಾನೇ ನೆಲ ಜಲ?
ಈ ಜಗದ ಸಕಲ
ಅಮ್ಮಾ ಇಲ್ಲದೆ ಏನಿಲ್ಲೆ
ದೇವರೇ ಬಲ್ಲ
ಅಮ್ಮಾ ನೀನಿಲ್ಲದೆ ನಾನಿಲ್ಲೆ.

✍ಎಂ.ವಿ. ಕವಿತಾ ಮನೋಜ್

ಚೆನ್ನಂಗಿ ಗ್ರಾಮ,
ಪಾಲಿಬೆಟ್ಟ ಅಂಚೆ,
ವಿರಾಜಪೇಟೆ ತಾಲೂಕು,
ದ. ಕೊಡಗು.

# ಓಂಕಾರೇಶ್ವರ ಸ್ತುತಿ

ಕಾಶಿಂದ ಬಂದವನೆ
ಮಡಿಕೇರಿಲಿ ನಿತ್ತವನೆ
ನಿಂಗರಾಜನ ಶಾಪನ ಕಳ್ದವನೆ
ಓಂಕಾರೇಶ್ವರ ನಿಂಗೆ ನಾ ನಮಿಸಿನೆ ॥

ಬಲ ಬದಿಲಿ ಮಹಾಗಣಪ
ಎಡ ಬದಿಲಿ ಸುಬ್ರಹ್ಮಣ್ಯ
ಎದ್ರ್‌ಲಿ ನಂದೀಶ
ಅದೃಶ್ಯ ರೂಪಲಿ ನೆಲಿಸಿಟ್ಟು ಪಾರ್ವತಿ ॥

ಶಿವರಾತ್ರಿಲಿ ಶಿವಂಗೆ
ಚೌತಿಲಿ ಗಣೇಶಂಗೆ
ಷಷ್ಠಿಲಿ ಸುಬ್ರಹ್ಮಣ್ಯಂಗೆ
ನಡ್ದವೆ ಪೂಜೆಗ ಬಗೆಬಗೆ ॥

ಶಿವ ನಂಗುಟ್ಟು ನಿನ್ನಲ್ಲಿ ನಿಷ್ಠೆ
ಭಕ್ತರ್ ಬಂದವೆ ಬುಟ್ಟು ಪ್ರತಿಷ್ಠೆ
ಶಿವ ನೀನ್ ಶಕ್ತಿಯ ಆಗರ
ಕಿಂಚಿತ್ತ್ ಬೇಡಿರೆ ಕೊಟ್ಟಿಯ ಅಪಾರ ॥

ಭಕ್ತರ ದುಃಖಗಳ ಪರಿಹರ್ಸ್ ಶಂಕರ
ವರ ಕೊಟ್ಟ್ ಕಾಪಾಡ್ ಈಶ್ವರ
ನಿನ್ನ ಬೇಡಿರೆ ಸಿಕ್ಕಿದೆ ಪರಿಹಾರ
ನೀ ಮಹಾಮಹಿಮ ಓಂಕಾರೇಶ್ವರ ॥

ಕಂಟಕ ಕಳಿಯೊ ಮೃತ್ಯುಂಜಯ
ಮಾಡಿನೆ ಅಭಿಷೇಕ ಸೇವೆಯ
ನೋಡಿಕೆ ಪೊಲ್ಯ ನಿನ್ನ ತೆಪ್ಪೋತ್ಸವ
ಎಂದೆಂದ್ ನೀಡ್ ಸುಖಶಾಂತಿ ಮಹದೇವ ॥

✍ಕಟ್ರತನ ಲಲಿತಾ ಅಯ್ಯಣ್ಣ

ಗೌಳಿಬೀದಿ,
ಮಡಿಕೇರಿ.

# ಇಕ್ಕಟ್ಟ್

ಸರಿಗೆ ಮೇಲೆ ನಡಿಗೆ;
ತಲೆಯ ಮೇಲೆ ಗಡಿಗೆ;
ಇವರ ದಾಟಿ ಹೋದು ಹೇಂಗೆ?
ಬೀಸ್ತ ಒಳೊ ಬಡಿಗೆ!

ಬಡಿಗೆ ಪೆಟ್ಟ್ ತಾಂಗಿಬುಟ್ರೆ
ಗಡಿಗೆ ಚೂರು ಚೂರು;
ಸರಿಗೆ ಒಸೀ ಜಾರಿ ಬುಟ್ರೆ
ಸೊಂಟ ತುಂಡು ಮೂರು!

ಬಡಿಗೆ ಹಿಡ್ದ ಜನ್ರ ಕರ್ದ್
ರಾಜಿ ಆದ್ರೆ ಹೇಂಗೆ?
'ನಗ ನಾಣ್ಯ ಕೇಳ್ವೊ,
ದನ ಧಾನ್ಯ ಕೇಳ್ವೊ,
ಮನೆ ತೋಟ ಕೇಳ್ವೊ,
ಬಾಳೆಗೊನೆ ಕೇಳ್ವೊ....
ಕೇಳ್ದರೆಲ್ಲ ಕೊಡಿಕೆ ಹೋದ್ರೆ
ಒಳ್ಯೊದೆಂತದ್ನಿಂಗೆ?'

✍ಕುತ್ಯಾಳ ನಾಗಪ್ಪಗೌಡ

ಕಿರಣ ಕುಟೀರ
ಸುಳ್ಯ – 574239
ಮೊ : 9448297221.

# ಹೆದ್ರಿಕೆ ಇಲ್ಲಾತ್

ಓ ಸೈಕಲ್ ಮೋಟರ್ ಗಾಡಿ ಬಂದ್
ಸೌಖರ‍್ಯ ಹೆಚ್ಚಾತ್.

ಸ್ವಾತಂತ್ರ್ಯ ಬಂದು ಎಲ್ಲವ್‌ಕೆ
ಹೆದ್ರಿಕೆ ಇಲ್ಲಾತು
ಜಗತ್ತಿನೊಳ್ ಜಗಕೊಂದು ಒಳ್ಳೆದಾತ್
ಹಿರಿಯರು ಕಿರಿಯರು ನನ್ನ ಸರಿ ಸಮಾನರ್
ಕೂಡೀರಿ ಇಂದು ॥ಓ॥

ಒಂದಾಗೆ ಮಾಡಿ ನಿವ್ಸ್ ಮತ್ತೊಂದ್ ಹೇಳ್‌ನೇ
ಎಲ್ಲರೂ ಕುದ್ರಿಕುಂತ.
ಓ ಪರತಂತ್ರ ಹೋಗಿ ಸ್ವಾತಂತ್ರ್ಯ ಬಂದು
71 ವರ್ಷ ಕಳ್ತು

ಕಪಟ ನಾಟಕ ವನ್ನರಿಯದ ಸ್ತ್ರೀಯರಿಗೆ
ತುಳಿದು ಕುಣ್‌ದಂಗೆ ಆತು..,
ಈ ಭೂಮಿ ಮೇಲೆ ತುಳಿದು ಕುಣ್‌ದಂಗೆ ಆತು., ॥ಓ ಸೆಕಲ್॥

ಊರ ಜನರ ಮುಂದೆ ತಿಕ್ಕಾಟ ಬೇಡಾಂತ
ಗ್ರಾಮ ಪಂಚಾಯತ್ ಆತು.,
ತಾಲೂಕು ಪಂಚಾಯತ್ ಆತು.,
ಜಿಲ್ಲಾ ಪಂಚಾಯತ್ ಆತು.,

✍ ಇಂಪನ, ಪಂಜಿಪಳ್ಳ

8ನೇ ತರಗತಿ,
ಗುತ್ತಿಗಾರ್ ಹಿರಿಯ ಪ್ರಾಥಮಿಕ ಶಾಲೆ,
ಸುಳ್ಯ

# ನಮ್ಮ ಜಿಲ್ಲೆ

ನಮ್ಮ ದೇಶ ಈ ಕೊಡಗು
ಲಾಯಿಕಾದ ನಾಡು ಈ ಕೊಡಗು
ಧೀರರ್ ಶೂರರ್ ಹುಟ್ಟಿ ಬೆಳೆದ ತಾಯ್ನಾಡ್

ಕುಂದಿಗೆ ಕುಂದೇ ಸವಾಲ್ ಒಡ್ಡಿದೆ,
ವಾಲ್ಮೀಕಿ ಹುಟ್ಟಿದ ಈ ಕೊಡಗು

ತಡಿಯಂಡ ಮೋಳುಂದ,
ಕೋಟೆ ಬೆಟ್ಟದ ನಡೂಂದ
ಬ್ರಹ್ಮಗಿರಿ ಉದ್ದಕ್ಕೂ,
ಹೆಮ್ಮೆ ಪಡುತ್ತಿರುವ ಈ ಕೊಡಗು,
ಲಾಯಿಕ್ಕಾದ ನಾಡ್ ಈ ಕೊಡಗು

ತರತರದ ಹೂ ಕಾಡ್‌ಲಿ ಉಟ್ಟು
ಹಣ್ಣು ಹಂಪಲು ತುಂಬಿಕಂಡುಟ್ಟು
ಶ್ರೀಗಂದ, ತೇಗ, ಬೀಟಿ, ಬೆಳ್ಳಂದಿ
ಹಲಸು, ಮಾವು, ನೊಜೊಳ,
ಎಲ್ಲಾ ಬೆಳೆದು ನಿತ್ತ ಈ ಕೊಡಗು
ಲಾಯಿಕ್ಕಾದ, ಪೊಲ್ಲುನ ಈ ಕೊಡಗು ॥

ಕಾಡುಲಿ ತರ ತರ ಹೂವುಗ ಒಲೊ
ಕರ್ಮಂಜಿ, ನೇರಳೆ
ಕಾಡೆಲ್ಲಾ ತರ, ತರ ಹಣ್ಣುಗ,
ಕೋಲ್, ಹೆಜ್ಜೇನು, ಮೂಲಿಜೇನು
ಕಾಡೆಲ್ಲಾ ಸುತ್ತಿರೆ ಕುಸಿ, ಕುಸಿ ಆದೆ
ಎಲ್ಲಾ ಬೆಳೆದು ನಿತ್ತ ಈ ಕೊಡಗು ॥

ಕಾಡ್‌ನ ಕಡ್ಡ್ ನಾಸ ಮಾಡ್ದೊ
ಹಣದ ಆಸೆಗೆ ಮರಗಳನ್ನೆ ನಾಸ ಮಾಡ್ದೊ
ಇದನ್ನ ಕಂಡ ಜನ ದುರಾಸೆಲಿ ಮುಳುಗಿದೆ
ಬೆಲ್ಲಕ್ಕೆ ಪಿಜಿನು ಮುತ್ತಿದಂಗೆ,

ಬೇಡದ ಕೆಲಸಗಳನ್ನ ಮಾಡ್ದೊ ಜನಗ
ದೇಶದ ಸೌಂದರ್ಯನ ನೋಡಿಕಂಡು
ಲಗ್ಗೆ ಹಾಕಂಡು, ನುಗ್ಗಿಕಂಡು ಬಂದವೆ
ಉಂಬುಳು ಕಚ್ಚಿ ರಕ್ತ ಹೀರ್‌ದಂಗೆ
ಇದ್ದರೆ ನಾವು ನಿದ್ರೆಲಿ ಎದ್ದಂಗೇ

ಕೊಡಗು ಸಂಪತ್ತನ ಉಳಿಸಿ, ಬೆಳೆಸಿಕೆ
ಕೈ ಎತ್ತಿ ನಿಲ್ಲಕ್ಕು ನಾವೆಲ್ಲ,
ನಮ್ಮ ದೇಶ ಈ ಕೊಡಗು
ಲಾಯಿಕ್ಕಾದ ನಾಡು ಈ ಕೊಡಗು..

✍ಕೊಂಪುಳಿ ಪೊನ್ನಮ್ಮ ಉತ್ತಪ್ಪ

ಐಕೊಳ ಗ್ರಾಮ,
ಮರಗೋಡು ಅಂಚೆ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

ಓದಿದ ಮೇಲೆ ಲಾಯ್ಕ ಉಟ್ಟುತೇಳ್ದು
ವಿಮರ್ಶೆ ಅಲ್ಲ.

(ಕಿರು ನಾಟಕ)

# ಕಲ್ಲುರ್ಟಿ ದೆವ್ವಕ್ಕೆ ಹರ್ಕೆ ಕೊಡ್ದು

ಹಿಂಗೇ ದಿನ ಉರುಳಿ ಉರುಳಿ ಕಾರ್ತಿಂಗಳ ಶುರುನ ಮಳೆ ಜಿರುಗುಟ್ಟಿಕಂಡೇ ಬಂದ್ ಬುಟ್ಟತ್. ಆಗ ಮನೇಲಿರುವ ತಾತಂಗೆ ಮಳೆ ಚಳಿಗೆ ಬೇಗ ಹೊಟ್ಟೆಸಿತು. ಆಗ ತಾತ ಎಂಥ ಮಾಡ್ದೊತೇಳಿರೆ ಬೇಗ ಬೇಗ ಗಂಜಿ ಮಾಡಿಸಿದರ ಬಳ್ಸಿಕಂಡು ಹನ್ನಿನಕ್ಕಿ ಗುದ್ದಿ ಹಾಕಿದ ಪೊಜ್ಜಿ ಮಾಡಿ ಬಳ್ಸಿಕಂಡು ಈ ಚಳಿಗೆ ಸಮಾ ಮಧ್ಯಾಹ್ನದ ಊಟ ಮುಗ್ಸಿ ಬಟ್ಲುನ ಅಲ್ಲೆ ಕರೆಗೆ ಇಸಿ ಕೈ ತೊಳ್ದು, ಮನೆನ ಚಿಂಟೇಲಿ ಹೋಗಿ ತಲೆ ಅಡಿಗೆ ಶಿಲುವೆ ಮಣಿನ ಇಸಿ ಒಂದು ಕಂಬಳಿ ತುಂಡುನ ಹೊದ್ದುಕಂಡ್ ಮಲ್ಗಿದ ತಾತಂಗೆ ಗೊರ್ಕೆ ನಿದ್ದೆನೇ ಬಂದು ಬುಟ್ಟತ್. ಪಿಳ್ಳಿಕ ಇಬ್ಬರು ಆಚೆ ಈಚೆ ಆಟ ಆಡಿಕಂಡು, ಅಪ್ಪನೊಟ್ಟಿಗೆ ಕೆಲ್ಸಕ್ಕೆ ಸೇರಿಕಂಡು, ಬೊಬ್ಬೆ ಹಾಕಿಕಂಡು ಇರ್ತ್ತಿರುಕಾಕನ ತಾತಂಗೆ ಒಮ್ಮೆಗೆ ಪಿಳ್ಳಿ ಮಕ್ಕಳ ಬೊಬ್ಬೆಗೆ ರಪ್ಪ ಎಚ್ಚರ ಆಗಿ ನೋಡಿರೆ ಕತ್ತಲಾದೋ ಅಲ್ಲ, ಮಳೆ ಕತ್ಲೆನೋ ಗೊತ್ತಾಕಿಲೆ. ತಾತ ಮಲ್ಗಿದಲ್ಲಿಂದಲೇ ಮೆಲ್ಲ ದೊಣ್ಣೆ ಕುತ್ತಿ ಎದ್ದೊ. ಪಿಳ್ಳಿಕ ಇಬ್ಬರು ಅತ್ತಿಂದಿತ್ತ ಇತ್ತಂದತ್ತ ಓಡಾಡುವೆ. ಒಟ್ಟಿಗೆ ನನ್ನ ಮಂಜ ಯಜಮಾನನೂ ಅತ್ತಂದಿತ್ತಾ ಇತ್ತಂದತ್ತಾ ಓಡಾಡ್ತ ಉಟ್ಟಲಾಂತ ಹೇಳಿಕಂಡು ತಾತ ಪಿಳ್ಳಿಕಳ ಕರ್ರ್ಯಕೆ ಶುರು ಮಾಡುವೆ.

ತಾತ : ಮಕ್ಕಳೇ... ಓ ಮಕ್ಕಳೇ... (ಮಕ್ಕ ಇಬ್ಬರೂ ಓಡಿಕಂಡ್ ಬಂದ್)

ಎರಡೂ ಪಿಳ್ಳಿಕ : ಓ ಬಂದೆ ತಾತ ಎಂತಕ್ಕೆ ಕರ್ದದ್!

ತಾತ : ಎಂತ ಇಲ್ಲೆ ಏನೋ ಭಾರಿ ಓಡಾಡ್ದು ಕಂಡದೆ ಹಾಂಗೆ ಕರ್ದದ್.

2ನೇ ಪಿಳ್ಳಿ : ಓ.... ಅದಾ ಇಂದ್ ದೆವ್ವಕ್ಕೆ ಹರ್ಕೆಗಡಾ.... ತಾತ ನೀವ್ಗೆ ಗೊತ್ಲೆನಾ?

ತಾತ : ಓ... ನಂಗೆ ಮರ್ತ್ ಹೋಗುಟು. ಬೊಳ್ಪಿಗೆ ಎದ್ದಾಂಗೆ ಇವ ಒಮ್ಮೆ ಹೇಳಿಕಂತ್. ಇಂದು ಕಲ್ಲುರ್ಟಿಗೆ ಹರ್ಕೆ ಮಾಡಿರೆ ಹೇಂಗೇಂತ ಮಕ್ಕಳಿಗೂ ಇಂದ್ ರಜೆ ಇತ್ತ್ತ. ಹಾಂ ನೆಂಪಾತ್ ಮಕ್ಕಳೆ ಅದಿರ್ಲಿ ನೀವುಗೆ ಎಂತ ಕೆಲ್ಸ?

2ನೇ ಪಿಳ್ಳಿ : ನಾವುಗೆ ಎಂತ ಕೆಲ್ಸ ಗೊತ್ತಿಲೆ ತಾತ. ನಮ್ಮ ಅಪ್ಪ ನಿಲ್ಲಿಕೆ ಕುದ್ರಿಕೆ ಬುಡ್ದುಲೆ ಅದ್ ತಂಬಾ ಇದು ತಂಬಾಂತ

1ನೇ ಪಿಳ್ಳಿ : ಇಂದ್ ಎಲ್ಲಾ ಅಡ್ಗೆ ಅಪ್ಪಂದೇ ಗಡ! ತಾತ ಅಮ್ಮಾ ಅಡ್ಗೆ ಮಾಡುವ ಸುದ್ದಿನೇ ಇಲ್ಲೆ. ಎಲ್ಯಾದ್ರೂ ಯಾಗೋಳು ಅಪ್ಪ ಅಡ್ಗೆ ಮಾಡ್ತುತಾದರೆ ನಾವು ಓದಿದಾಂಗೆ ತಾತ.

ತಾತ : ಸರಿ, ಮಜ. ಅಪ್ಪ ಮುಂದೆಂದಳೇ ಹಂಗೇ ಎಲ್ಲಾನೂ ತಂದು ಕೊಟ್ಟೇ ಆಕು.

2ನೇ ಪಿಳ್ಳಿ : ಕತ್ತಿ ತಂಬ ಕಾಯಿ ಚೊಲ್ಲು, ಬಾಳ್ಗೆ ಕೊಯ್ಯೆನಿ, ಮಣೆತಂಬ ತೆರಿ ಕುದೆಂಟಿ ಎಲ್ಲಿಟು, ಓ ರಾಮಾss ಅಪ್ಪಂಗೆ ಕುದ್ದಲ್ಲಿಗೆನೇ ಆಕು. ಅದು ಯಾಕೆ ತಾತ ಅಮ್ಮ ಅಡ್ಗೆ ಮಾಡಿಕೆ ಆಗದಾ.

ತಾತ : ಇಲ್ಲೆ ಮಜ ದೆವ್ವಕ್ಕೆ ಯಾಗೋಳು ಗಂಡ್‌ಗಳೇ ಅಡ್ಗೆ ಮಾಡ್ತು ಪದ್ಧತಿ. ದೆವ್ವಕ್ಕೆ ರೊಟ್ಟಿ ಮಾಡ್ದರ್‌ಂದ, ಕೋಳಿ ಕೊಲ್ಲುದು, ಗೈಪು ಮಾಡ್ದು, ಗಂಜಿ ಬೇಯ್ಸುದು ಎಲ್ಲನೂ ಗಂಡ್‌ಗಳೇ ಮಾಡೋಕುಂತ ಪದ್ಧತಿ. ಮುಂದೆ ನಮ್ಮ ಅಪ್ಪನೂ ಮಾಡ್ತಿದ್ದೊ. ಆಮೇಲೆ ನಾ ಮಾಡಿಕೆ ಶುರು ಮಾಡ್ದೆ. ಈಗ ನಿಮ್ಮ ಅಪ್ಪ ಮಾಡ್ತಾ ಉಟ್ಟು. ಇನ್ನ್ ಮುಂದೆ ನೀವು ಅದರ ಪಾಲಿಸೋಕು. ಹೆಂಗೆಲ್ಲಾ ಮಾಡ್ದೂಂತ ಲಾಯಿಕ್ ನೋಡಿಕಣಿ. ನೀವು ಗಂಡು ಮಕ್ಕ ಎಲ್ಲಾ...?

2ನೇ ಪಿಳ್ಳಿ : ಮಳೆಗಾಲ ತೇಳಿರೆ ಮುಂದೆನ ಕಾಲಲಿ ಬೇಸಾಯ ನಾಟಿ ಎಲ್ಲಾ ಮುಗ್ಸಿ ಗದ್ದೆಲಿ ಕೈ ಹೊಡೆ ಬಾಕ್ಯಾಕನ ಮಾರಿ ಬೀರಿಗಳ ಎಲ್ಲ ಬಾರದಂಗೆ ದೆವ್ವ ದೇವುರುಗಳ ನೆನ್ಸಿಕಾಂಬೋದು ಪದ್ಧತಿ.

1ನೇ ಪಿಳ್ಳಿ : ಹೊಡೆ ತೇಳಿರೆ ಎಂತ ತಾತ.

ತಾತ : ಹೊಡೆ ತೇಳಿರೆ ಕೈ ಬೆಳ್ದ್ ಕದ್‌ರ್ ಹೊರ್ಡುವ ಸಮಯ ನೋಡಿಕೆ ಪೊರ್ಲು. ದೆವ್ವ, ದೇವ್ರುಗಳಲ್ಲಿ ನಾವು ಬೇಸಾಯ ಮಾಡೋವು ಕಲ್ಲುರ್ಟಿ, ದೇವ್ರಿಗೆ ಹೆಡ್ದ್ ಹರ್ಕೆ ಕೊಟ್ಟವೆ. ಕಲ್ಲುರ್ಟಿತೇಳಿರೆ ಮನೆದೆವ್ವ. ಅದ್ಕೆ ಮನೆ ಒಳಗೆ ಇರ್ದೆ ಕೈ ಮುಗ್ಯೋದು. ಇದ್ ಮಕ್ಕ ಮರಿಗಳಿಗೆ, ಮನೇಲಿದ್ದವ್ಕೆ ಕಾಯಿಲೆ ಕಸಾಲೆಗ ಬಾರದಂಗೆ ನೋಡಿಕಾಂಕುತ ನಂಬಿಕೆ.

ಎರ್ಡೂ ಪಿಳ್ಳಿಕ : ಈಗ ಗೊತ್ತಾತು ತಾತ, ಇನ್ನ್ ನಾವುನು ಕಲ್ತು ಕಂಡವೆ.

✍ಅಶಿತ ಬಿ.ಎಸ್.

ಪ್ರಥಮ ವಾಣಿಜ್ಯ
ಶ್ರೀ ಶಾರದ ಪದವಿ ಪೂರ್ವ ಮಹಿಳಾ ಕಾಲೇಜು,
ಸುಳ್ಯ, ದ.ಕ–574 239.

## ರಂಗಪ್ರಯೋಗ

# "ಮಾಯಕ"

"ನಿನ್ನೆದು ಇಂದಿಲ್ಲೆ, ಇಂದ್‌ದ್ ನಾಳೆ ಇಲ್ಲೆ, ನಾಳೆದ್ ನಾಡ್ದಿಲ್ಲೆ." ಇದ್ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ವತಿಂದ ಹಾಲೆ ಮಜ್ಜಲ್ಲಿ 2018 ರ ಆಗಸ್ಟ್ 12ರಂದ್ ನಡ್‌ದ ಅರೆಬಾಸೆ ಸಂಸ್ಕೃತಿಲಿ ಆಟಿ ಉತ್ಸವ ಜಂಬರಲಿ ಸುಳ್ಯದ ರಂಗ ಮಯೂರಿ ಕಲಾಶಾಲೆ ಆಡ್ದ ಅರೆಬಾಸೆ ನಾಟ್ಕದ ಮಾತ್.

ಹೊಸತನದ ಹುಚ್ಚುಲಿ ಹಿಂದೆನ ಸಂಸ್ಕೃತಿ, ಸಂಪ್ರದಾಯಗಳ್ನ ಮರ್ತ್‌ವೆ. ಇದ್ಕೆ ಕಾಲನೂ, ಹೊತ್ತುನು ಕಾರಣ ಆವುಟು. ಇಂದಲ್ಲ ನಾಳೆ ಒಳ್ಳ ದಿನ ಬಂದದೆ. ಕಳ್ದ್‌ದರ ನೆನ್ಸಿ ಇಂದ್‌ನ ಸುಖನ ಕಣ್ಣ್‌ರಿಲಿ ಕಳೆದುಬೇಡ. ಬದಲಾದು ಜಗತ್ತ್‌ನ ಪದ್ದತಿ ತೆಳ್ವ ವಸ್ತುನ ಇಟುಕಣ್ 'ಮಾಯಕ'ನ ಕಟ್ಟಿಯೊಳ. ಹಳ್ಳಿಬಾಸೆನ ಎತ್ತಿಕಂಡರೆ ಹಳ್ಳಿಕತೆಗಳ ಬುಟ್ಟು ಕನ್ಸ್ ಕಾಂಬಕೆ ಬಂಜ ಆದೆ. ಅಷ್ಟಲ್ಲದೆ ಗಟ್ಟಿ ಸಂಸ್ಕೃತಿ, ಸಂಪ್ರದಾಯ ಏನಾರೂ ಚೂರು ಉಳ್‌ದಿದ್ದರೆ ಅದ್ ಹಳ್ಳಿನ ಸಣ್ಣ ಜನಗಳ ಬೊದ್ಕುಲೆ ಅಲ್ಲದೆ ಈಗನ ಆಡಂಬರಲಿ ಅಲ್ಲ.

ನಾಟಕ ಯಾವುದೆ ಗದ್ದಲ ಇಲ್ಲದೆ ಹೊಸ್ತರ ಸೇರ್ಸದೆ ಕಮ್ಮಿ ಮಾತ್ ಅಭಿನಯನೆ ಹೆಚ್ಚ್ ಇದ್ದ್, ಹಳ್ಳಿ ಜನರ ಬೊದ್ಕುನ ಗೂಡಾವುಟ್ಟು. ಅಜ್ಜ ಪುಳ್ಳಿನ ನೊಡುಲಿ ನಡೆವ ಮಾತ್‌ಕತೆಗಳ್ಲಿ ಅಜ್ಜನ ಪಂಡ್‌ನ ನೆನ್ಪುಗ ಭೂತರಾಧನೆ, ಗದ್ದೆನಾಟಿ, ಸರಾಯ ತೆಗೆದರ ತಿಳ್ಸುವೆ. ತೀರಿಹೋದ ಅಜ್ಜಿನ ನೆನ್ಪಾದೆ. ಅಜ್ಜಿ ಹೋಕನ ಊರ್‌ನ ಕುಶಾಲ್–ಕೊಂಡಾಟ, ಆಚಾರ–ವಿಚಾರಗ, ನೆಗೆ–ಖುಷಿ, ಹಚ್ಚ–ಹಸುರು, ಎಲ್ಲಾ ತಕಂಡ್ ಹೋದೊ. ಮಾತ್ ಬಂದದೆ. ಪೀಳಿಗೆಂದ ಪೀಳಿಗೆಗೆ ಬದಲಾದೆ. ಹಿಂದೆದರ ಮುಂದಕ್ಕೆ ಒಳ್ಸಿಕಣ್ಣೊಕು. ಆದ್ರೆ (ಆಧುನಿಕ) 'ಮಾಯಕ' ಎಲ್ಲಾದರ ನುಂಗಿ ಹಾಕಿದೆ. ನವುಗೆ ಗೊತ್ತಿಲ್ಲದೆ ಒಂದಲ್ಲ ಒಂದು ರೀತಿಲಿ ನಾವೂ ನೀವೂವೆಲ್ಲವು ಮಾಯಕಕ್ಕೆ ಬಲಿಯಾದವೆ.

ಮನ್ಸ್‌ಗಳ ನೊಡುಲಿ ನಂಬಿಕೆ ವಿಶ್ವಾಸ ಕಮ್ಮಿ ಆವುಟು. ಬೆಣ್ಣೆಯಂತ ಮನ್ಸ್‌ಗ ಕಲ್ಲಾಗಳೊ, ತುಂಬು ಸಂಸಾರ ಭಾಗ ಆವುಟು – ಹೀಗೆ ನಡೆವ ಸತ್ಯನ ಅಜ್ಜ ಪುಳ್ಳಿಗೆ ಒಪ್ಸುವೆ. ಹೊಸ ಬೆಳ್ಕ್ ಪುಳ್ಳಿನ ಮೋರೆಲಿ ಕಂಡದೆ. ಮಾತ್ ಕಮ್ಮಿಮಾಡಿ

ನಟನೆ ಹೆಚ್ಚಿಗೆ ಇಸಿಕಂಡ್ ಕಲಾ ಶಾಲೆನ ಸುರೂನ ಕೂಸು ಆದರೂ ತಮ್ಮ ತಮ್ಮ ಕೆಲ್ಸಗಳ್ನ ಎಲ್ಲಾ ಕಲಾವಿದರು ಲಾಯ್ಕ ಮಾಡಿಯೊಳೊ.

ರಚನೆ, ಮೇಸ್ತ್ರಿನ ಹೊಣೆಲಿ ಲೋಕೇಶ್ ಊರುಬೈಲು ಗೆದ್ದಳೊ. ಹಿಂದೆ ಸಂಗೀತಲಿ ಹರ್ಷಿತ್ ಬೊಳಿಯ ಮಜಲುರವರ ಕೊಳಲು ಇಂಪಾಗಿತ್. ಪಾತ್ರವರ್ಗಲ್ಲಿ ಅಜ್ಜ ಭವಾನಿಶಂಕರ ಅಡ್ತಲೆ, ಪುಳ್ಳಿ ತುಷಾರ್‌ಗೌಡ, ಕೊಣ್‌ತಲ್ಲಿ ಅನುಶ್ರೀ ಕೊಕಡ್ಕ ಮತ್ತೆ ನಿರ್ಮಿತಗೌಡ ಮಿಂಚಿದೊ. ಹವಿನ್, ಹರ್ಷಿತ್, ಪುನೀತ್, ವಿಜಯಕುಮಾರ್ ಮಯೂರಿ, ರೋಷನ್, ಶಶಿಕಾಂತ್, ರಾಜೇಶ್, ಸುಂದರ, ಸಂತೋಷ, ನಾವೆನೂ ಕಮ್ಮಿ ಇಲ್ಲೆತ ಅಭಿನಯಿಸಿದೊ. ಹಿಂದೆಂದ ಪ್ರಶಾಂತ್ ಊರುಬೈಲು, ಕಮಾಲಾಕ್ಷ ಆಚಾರ್ಯ ಸಾಥ್‌ಕೊಟ್ಟೊ.


✍ಯೋಗೀಶ ಹೊಸೊಳಿಕೆ

ಕಿರಣರಂಗ ಅಧ್ಯಯನ ಸಂಸ್ಥೆ,
ಗುತ್ತಿಗಾರು – 574218.
9449576632.


ಸೊಂಟಲಿ ಕುದ್ದ ಕೂಸಿಗೆ
ಅದರ ಅಯ್ಯೆ
ತುತ್ತು ಕೊಟ್ಟ್‌ಕಂಡ್
ಅಲ್ಲಿ ನೋಡ್ ಮರ
ಆಚೆ ನೋಡ್ ಹಕ್ಕಿ
'ಒಂದ್ ಬಾಯಿ
ಒಂದ್ ಬಾಯಿ ಮಾಮ್'ತ
ಊಟ ಕೊಡುದರ ನೋಡಿಕೆ
ಪೊಲ್ರ್ಲು ಅಲಾ...?

ಚಿಂತನೆ

# 1. ನಮ್ಮ ಅವ್ವಂದರ್‌ಗೆ ನಮನ

**(ಹೆಣ್ಣ್‌ನ ಶೋಷಣೆ ಬತ್ತ್)**

ಅಪ್ಪ, ಅವ್ವ, ಗುರುಹಿರಿಯರ್ ಪ್ರಾತಃಸ್ಮರಣೀಯರ್. ಅವರ್‍ಲಿ ಜನ್ಮ ಕೊಟ್ಟ ತಾಯಿಗಂತೂ ಹಿರಿಯಸ್ಥಾನ. ಎಷ್ಟೋ ಸುಸಂಸ್ಕೃತ ಕುಟುಂಬಗಳ್ಲಿ ಹೆಣ್ಣ್‌ಕೂಸ್‌ನ ಹುಟ್ಟಿದ ದಿನಂದಳೇ ತಾಯಿಗೆ ಸಮಾನಂತೇಳಿ ಗೌರವ್ಸಿವೆ. ತುಂಬಾ ನಿಗಾ ವಯ್ಸಿ ಅಕ್ಕರೆಲಿ ಸಾಂಕಿ ಸಲಹಿವೆ. ತೌರ್‌ಲಿ ಈ ಕೂಸ್ ಯಾಗೊಳೂ 'ನಂಟೆತಿ'ಂತ ಒಡ ಹುಟ್ಟಿದೊವು ಪ್ರೀತಿಸಿವೆ. ಅಪ್ಪ ಅವ್ವಂದರ್, ಮುಂದೆಗೆ ಗಂಡನ ಮನೆ ಸೇರಿಕಿರುವ ಮಗಳ್ ಎಲ್ಲರೊಟ್ಟಿಗೆ ಹೊಂದಿಕಂಡ್ ಸುಖ ಸಂತೋಷಲಿ ಬಾಳಲೀಂತ ಹರ್‌ಸಿವೆ. ಹುಟ್ಟಿದ ಮನೆಗೂ ಹತ್ತಿದ ಮನೆಗೂ ಕೀರ್ತಿ ತರಲೀಂತ ಹಾರೈಸಿವೆ.

ಮಮತೆನ ಮಡಿಲ್‌ಂದ ಹೊರಬಂದ್ ಸಂಸಾರಕ್ಕೆ ಇಳಿಯಕನ ನೂರಾರ್ ಕನ್ಸ್‌ಗಳ ಹೊತ್ತ್ ತಂದ ಎಷ್ಟೋ ಹೆಣ್ಣ್‌ಮಕ್ಕಳ್‌ಗೆ ಗಂಡನ ಮನೆಲಿ ಸುರೂಗೆ ಎದ್‌ರಾದು ನಿರಾಶೆ ಮಾತ್ರ. ಆದರೂ ಹೊಸ ವಾತಾವರಣದ ಹೊಸ ಬೊದ್ಕ್‌ಗೆ ಹೊಂದಿಕಂಡವೆ. ಪುರುಷ ಪ್ರಾಬಲ್ಯದ ಸಮಾಜಲಿ ಹೆಣ್ಣ್‌ಗೆ ಮಾತ್ರ ಅನ್ವಯ್ಸುವ ಕೆಲೊವು ಕಟ್ಟ್ ಕಟ್ಟಳೆಗ ಇದ್ದವೆ. ಅದರೊಟ್ಟಿಗೆ 'ಹುತ್ತದೊಳಗೆ ಹುತ್ತ'ದ್ದಾಂಗೆ ಹತ್ತಿದ ಮನೆಗೇ ಆದ ಅತಿರೇಕದ ಸಂಪ್ರದಾಯಗ ಸ ಸೇರಿಕಂಡವೆ. ಜೀವನದ ಕಟುಸತ್ಯಗ ಹೊರ ಬಂದವೆ. ವರ್ಷಗ ಉರ್‌ಳಿವೆ. ಎಲ್ಲದರ ನಿಬಾಯ್ಸಿಕಂಡ್ ಹೆಣ್ಣ್ ಸಂಸಾರ ನೌಕೆಗೆ ಚುಕ್ಕಾಣಿ ಆದೆ.

ಕುಲಾಭಿವೃದ್ಧಿಗೆ ಗೃಹಿಣಿ ನಿರ್ವಯ್ಸಕಾದ ಹೊಣೆಗಾರಿಕೆಗಳ ನಮ್ಮ ಹಿರಿಯರ್ ಈ ರೀತಿ ವರ್ಣಿಸಿಯೊಳೊ:

"ಕಾಯೇಷು ದಾಸೀ ಕರಣೇಷು ಮಂತ್ರೀ
ರೂಪೇಚ ಲಕ್ಷ್ಮೀ ಕ್ಷಮಯಾ ಧರಿತ್ರಿ!
ಭೋಜ್ಯೇಷು ಮಾತಾ ಶಯನೇಷು ವೇಶ್ಯಾ
ಷಾಡ್ಗುಣ್ಯಯುಕ್ತಾ ಕುಲಮುದ್ಧರೇದ್ಧಿ ॥"

ಈ ಎಲ್ಲಾ ಕರ್ತವ್ಯಗಳ ಸಮರ್ಪಕಲಿ ನೆರವೇರ್ಸುದರ್‍ಲಿ ನಮ್ಮ ಅವ್ವಂದರ್ ಎಂದೂ ಹಿಂದೆ ಬೀತ್‌ಲ್ಲೆ – ಗಂಡನ ಮನೆಲಿ (ಈಗ ತನ್ನ ಮನೆಲಿ) ಸಿಕ್ಕಕಾದ

ಸಮಾನತೆ ಸಿಕ್ಕದಿರ್‌ಕನನೂ.

ಸಾವಿರ ಸವಾಲ್‌ಗಳ ಎದ್‌ರ್ಸಿ ಜೈಸಿರೂ ಹೆಣ್ಣ್ ಮಾನಸಿಕ ಆಗಿ ಸೋತ್ ಹೋಗಿ ಬೊದ್ಕೇ ಒಂದ್ ಬಂಧನಾಂತ ಮುದ್‌ಡಿ ಹೋದು ಅವ್ಳ ನಡ್ತೆನ ಬೇರೆವು ಹಗ್‌ರಲಿ ಮಾತಾಡ್‌ಕನ; ಶೀಲನ ಗಂಡನೇ ಸಂಶಯಪಡ್‌ಕನ. ಇದೂ ಅಲ್ಲದೆ, ಸಮಾಜಲಿ ಇರುವ ಇನ್ನೂ ಒಂದ್ ದೊಡ್ಡ ದುರಂತಾಂತೇಳ್ರೆ, ಗಂಡ್ ಹೆಣ್ಣ್‌ಂತ ಯಾರನೂ ಬುಡದೆ, ಅಸಹಾಯಕರ್‌ಗಳ ವಿನಾಕಾರ್ಣ ಶೋಷಣೆಗೆ ಈಡಾಗ್ಸುದು. ಈ ಕುತ್ತಗ ತ್ರೇತಾಯುಗಲ್ಯೂ ಇದ್ದೋಂತ ಆದಿಕವಿ ವಾಲ್ಮೀಕಿನ ರಾಮಾಯಣಂದ ಸಾಬೀತಾದೆ. ಅಕಳಂಕ ನೀತಿ ನಡ್ತೆಗಳಿಗೆ ಶ್ರೀರಾಮ ಸೀತೆಗ ಆದರ್ಶರ್‌ಂತ ಇಂದಿಗೂ ನಾವು ಅಭಿಮಾನಪಟ್ಟವೆ. ಆದರೆ, ಪವಿತ್ರಮಾತೆ ಸೀತಾ ಅದೆಷ್ಟ್ ಸಂಕಟಕ್ಕೆ ಒಳಗಾತ್‌ಂತ ರಾಮಾಯಣದ ಕೆಲೊವು ಘಟನೆಗಳೇ ಸಮರ್ಥಿಸಿವೆ. ಆ ಸಂದರ್ಭಗಳ ಹಂಞ ವಿವರಲಿ ವಿಮರ್ಶಿಸುದು ಹಿತನೂ ಅಗತ್ಯನೂ ಹೌದು. ಸೀತೆನ ಪರಿಶುದ್ದ ಜೀವನದ ಕತೆನೇ ತಾನೆ ರಾಮಾಯಣದ ಆತ್ಮ!

ರಾಮಾಯಣದ ಕಾಲಲಿ ಮಾನವ, ದಾನವ (ರಾಕ್ಷಸ) ಮತ್ತೆ ವಾನರ ಸಂಸ್ಕೃತಿಗ ಪ್ರತೀತಿಲಿದ್ದೊ. ಮಾನವ-ದಾನವರೊಳಗೆ ಅದ್ಯಾಕೋ ಎಣ್ಣೆ-ಸೀಗೆ ಸಂಬಂಧ. ಋಷಿಗಳ್‌ಗಂತೂ ರಾಕ್ಷಸರ್ಲಿ ಏನೇನೂ ಸಹನೆ ಇತ್ಲೆ. ಋಷಿ ವಿಶ್ವಾಮಿತ್ರ ಎಳೇ ರಾಜಕುಮಾರ ರಾಮನ ಕೈಲಿ ರಾಕ್ಷಸರಾದ ತಾಟಕೆ ಸುಬಾಹುಗಳ ಕೊಲ್ಲ್‌ಸಿತ್. ಮಾನವರ್ ಬಿಲ್ಲ್‌ವಿದ್ಯೆ, ಶಸ್ತ್ರಾಸ್ತ್ರ ಪ್ರಯೋಗಲಿ ನೈಪುಣ್ಯತೆ ಪಡ್ದಿದ್ದರೆ ರಾಕ್ಷಸರ್‌ಗೆ ಕಾಮರೂಪ (ಬೇಕ್ ಬೇಕಾದ ರೂಪ ತಾಳುವ ಶಕ್ತಿ), ಮಾಂಯವಿ ವಿದ್ಯೆ ಕರಗತ ಆಗಿತ್ತ್. ಈ ಹಿನ್ನೆಲೆಲಿ ಶ್ರೀರಾಮನ ಹಾಂಗೂ ಅಂವನ ಸಹಧರ್ಮಿಣಿ ಸೀತೆನ ಜೀವನದ ಅಮೂಲ್ಯ ಸಹಪಯಣನ ಒಂದಿಷ್ಟ್ ಪರಿಶೀಲಿಸೊನೊ:

1. ಕೋಸಲ ದೇಶಂದ ಹೊರೆಗೆ ಹದ್ನಾಲ್ಕ್ ವರ್ಷಗಳ ವನವಾಸಕ್ಕೆ ಹೊರ್ಟ ಶ್ರೀರಾಮ ಸೀತೆ ಲಕ್ಷ್ಮಣರ್‌ಗೆ ನೆಲೆ ಸಿಕ್ಕಿದ್ ಕಾಡ್‌ಪ್ರಾಣಿಗ ಅಲ್ಲದೆ ರಾಕ್ಷಸರ್ ವಾಸಿಸ್‌ತ್ತಿದ್ದ ಅರಣ್ಯಗ. ಸುರೂಗೆ ಪ್ರಶಾಂತ ವಾತಾವರಣದ ಚಿತ್ರಕೂಟಲಿ ಹಂಞ ಕಾಲ ಕಳ್ದೊ. ಅಲ್ಲಿಂದ ಪ್ರಯಾಣ ಬೆಳ್ಸಿ ಪಂಚವಟಿ / ದಂಡಕಾರಣ್ಯನ ಸೇರಿ ಎಲೆಮನೆನ ನಿರ್ಮಿಸಿಕಂಡೊ. ಅಲ್ಲಲ್ಲಿ ಸಂತೋಷಲಿ ಬೊದ್ಕ್‌ತ್ತಿದ್ದ ಋಷ್ಯಾಶ್ರಮಸ ಇದ್ದೊ. ಋಷಿಗ, ತಾವ್ ನಡ್ಸ್‌ವ ಯಜ್ಞ ಯಾಗಗಳ್‌ಗೆ ರಾಕ್ಷಸರ್‌ಂದ ತೊಂದರೆ ಆದೆಂತೇಳ್ವ ಕಾರಣವೊಡ್ಡಿ ರಾಕ್ಷಸರ ಕೊಲ್ಲಿಕೆ ರಾಮನ ಹುರಿದುಂಬಿಸಿದೊ. ಅಂತಾ ಒಂದ್ ಸಂದರ್ಭಲಿ, ಯಾವ ವೈರತ್ವನೂ ಇಲ್ಲದೆ, ಅವರ್ದೇ ಜೀವನಕ್ರಮಲಿ



5

ಬೊದ್ಕ್‌ತ್ತಿರ್‌ವ ರಾಕ್ಷಸರ ವಿನಾಕಾರಣ ಕೊಲ್ಲುದು ಸರಿಯಲ್ಲಾಂತ ವಿಚಾರಮತಿ ಸೀತೆ ಗಂಡನೊಟ್ಟಿಗೆ ವಾದಿಸಿತ್. ಆದರೆ ದುಷ್ಟರ ಕೊಲ್ಲುದು ಕ್ಷತ್ರಿಯನ ಕರ್ತವ್ಯನೂ ಧರ್ಮನೂಂತೇಳಿ ಋಷಿಗ ಒತ್ತಡ ಹೇರಿ ರಾಮನ ಪರಾಕ್ರಮನ ಬಳ್‌ಸಿಕಂಡೊ.

2. ದಂಡಕಾರಣ್ಯಲಿ ದಿನಕಳ್ಯತ್ತಿರ್‌ಕನ ಕೆಲೊವು ಭೀಕರ ಘಟನೆಗ ನಡ್ದೊ :
(i) ಒಂದ್ ದಿನ ಲಂಕಾಧಿಪತಿ ರಾವಣನ ತಂಗೆ ಶೂರ್ಪನಖಿ ತನ್ನ ರಾಕ್ಷಸಿ ರೂಪನ ಬದಲ್ಸಿ ಪೊರ್ಲುನ ಯೌವನದ ಮಾನವ ಗೂಡೆನ್ನಾಂಗೆ ರೂಪತಾಳಿ ಬಂದ್ ರಾಮನೊಟ್ಟಿಗೆ ಪ್ರಣಯ ಸಮಾಗಮಕೆ ಪೀಡ್ಸಿತ್; ಜೋರಾಗಿನೇ ಹಟ ಮಾಡ್ತ್. ಇದ್ ಯಾದೋ ರಾಕ್ಷಸಿನ ಮಾಯಾವಿ ಚಮತ್ಕಾರಂತ ಅರ್ಥ ಮಾಡಿಕಂಡ್ ರಾಮ ಲಕ್ಷ್ಮಣರ್ ಅವ್ಳ ವಿಪರೀತದ ವರ್ತನೆಗೆ ಇನ್ನೂ ವಿಪರೀತದ ಶಿಕ್ಷೆ ಕೊಟ್ಟೊ. ಅವ್ಳ ಕೆಬಿ, ಮೂಕ್‌ಗಳ ಕೊಯ್ದ್ ವಿರೂಪಗೊಳ್ಸಿ ಹೊಡ್ದ್ ಅಲ್ಲಿಂದ ಓಡ್ಸಿದೊ. ರಾಕ್ಷಸಿನ ಯೌವನದ ತೀವ್ರ ಬಯಕೆಗೆ ಆರ್ಯ ರಾಜಕುಮಾರರ ಈ ಕೃತ್ಯೆ ರಾಕ್ಷಸರ ಕಠಿಣದ ಪ್ರತಿಕಾರಕ್ಕೆ ಆಹ್ವಾನ ನೀಡ್ತ್, ಸೀತಾಪಹರಣಕ್ಕೆ ಪೀಠಿಕೆ ಹಾಕಿತ್!

ಆ ಕಾಲಲಿ ಆರ್ಯರ್ ಹೇಂಗೆ ರಾಕ್ಷಸರ ನಿಕೃಷ್ಟಲಿ ನೋಡ್ತಿದ್ದೋತ ಇದರ್‌ಂದ ಗೊತ್ತಾದೆ. ಇನ್ನೊಂದ್ ಸಂದರ್ಭನ ಊಹಿಸೊನೊ ಒಂದ್ ವೇಳೆ ಅಯೋಧ್ಯೆಲಿ ಯಾವ್ಳೋ ಆರ್ಯ ಯುವತಿಯೊಬ್ಬಳ್ ರಾಮಲಕ್ಷ್ಮಣರೊಟ್ಟಿಗೆ ತನ್ನ ವಯೋಸಮ್ಮತದ ಪ್ರೇಮಸುಖನ ಯಾಚಿಸಿರ್‌ತ್ತಿದ್ದರೆ ಅವ್ಳ್‌ಗೂ ಇದೇ ರೀತಿನ ಶಿಕ್ಷೆ ಕೊಡುತ್ತಿದ್ದೊನೊ?.....

ಅಂದ್‌ನ ಸಮಾಜಲಿ ಶ್ರೇಷ್ಠ ವರ್ಗದೊವೂಂತ ವಿಂಗಡ್ಸಿಕಂಡ್ ಗುರುಗಳ ಸ್ಥಾನ ವಯ್ಸಿಕಂಡವರ್‌ಂದ ಕ್ಷತ್ರಿಯರ್ ಕಲ್ತ ಪಾಠದ ಪರಿಣಾಮ ಇದಾಗಿರ್ದು! ಇನ್ನೂ ಒಂದ್ ನಿದರ್ಶನ: ವನವಾಸ ಕಳ್ದ್ ಅಯೋಧ್ಯೆಲಿ ಶ್ರೀರಾಮನ ಪಟ್ಟಾಭಿಷೇಕ ಆದ ಮೇಲೆ ಅಂವನ ರಾಜ್ಯಭಾರದ ಕಾಲಲ್ಯೂ ವರ್ಣಭೇದ ಆಚರಣೆಲಿತ್ತ್. ಶೂದ್ರರ್ ತಪಸ್ಸ್ ಮಾಡ್ದು ನಿಷೇಧಂತೇಳಿ ಆಗ ಸಾಧನೆಲಿದ್ದ 'ಶೂದ್ರ ತಪಸ್ವಿ' ಶಂಭುಕನ ಶ್ರೀರಾಮ ವಧಿಸಿತ್! ಇದರ ಔಚಿತ್ಯ ಜಿಜ್ಞಾಸುಗಳಿಗೆ ಇಂದಿಗೂ ಚರ್ಚೆನ ವಿಷಯಯಾಗಿನೇ ಒಳ್ದುಟು.

(ii) ಮಾಯಾವಿ ಮಾರೀಚ ಚಿನ್ನದ ಜಿಂಕೆನ ರೂಪ ತಾಳಿ ಸೀತೆ ರಾಮ ಲಕ್ಷ್ಮಣರ ಮರುಳ್‌ಗೊಳ್ಸಿದೂ ಸಂನ್ಯಾಸಿ ವೇಷಲಿ ಬಂದ್ ರಾವಣ ಸೀತೆನ ಅಪಹರ್ಸಿದೂ ಇದೇ ದಂಡಕಾರಣ್ಯಂದ. ಲಂಕೆಲಿ ಸೀತೆ ಸಂಪೂರ್ಣ ರಾಕ್ಷಸರ

ಹತೋಟಿಲಿರ್‌ಕನ ಅವ್ಳ ಮನವೊಲ್ಸಿಕೆ ನಾನಾ ರೀತಿಲಿ ಪ್ರಯತ್ನಪಟ್ಟರೂ ರಾವಣ ಎಂದೂ ಸೀತೆನ ಶೀಲನ ಕೆಡ್ಸಿಕೆ ಪ್ರಯತ್ನ ಮಾಡ್‌ತ್ಲೆ; ಅಲ್ಲಿ ಬಲಶಾಲಿ ರಾವಣನ ಕೈತಡ್ಯೋವು ಯಾರೂ ಇತ್ಲೆ. ಬಹುಶಃ ರಾಕ್ಷಸ ಸಂಸ್ಕೃತಿಲಿ ಅಂತ ಅತ್ಯಾಚಾರಕ್ಕೆ ಆಸ್ಪದ ಇದ್ದಿರಿಕ್ಕಿಲ್ಲೇಂತ ಭಾವಿಸಕಾದೆ.

3(i) ವಾನರ ಸೇನೆನ ಸೇರ್‌ಸಿಕಂಡ್ ಲಂಕೆನ ಗೆದ್ದ್ ರಾವಣನ ಕೊಂದ್ ಧರ್ಮಪತ್ನಿ ಸೀತೆನ ರಾಕ್ಷಸರ ವಂಶಂದ ಬುಡ್ಸಿದ ಮೇಲೆ ಶ್ರೀರಾಮ ಮಾಡ್ದ ಸುರೂನ ಕಾರ್ಯ ಸೀತೆನ ಅಗ್ನಿಪರೀಕ್ಷೆಗೆ ಗುರಿಪಡ್ಸಿದ್. ರಾಮಂಗೆ ಸೀತೆನ ಶೀಲದ ಮೇಲೆ ಸಂಶಯ ಇದ್ದಿರಕ್ಕಿಲ್ಲೇಂತ ನಾವು ನಂಬಿರೆ ಯಾರ ಮೆಚ್ಚ್‌ಸಿಕೆ ಈ ಕಾರ್ಯ ನಡ್ತ್? ಲೋಕನ ಮೆಚ್ಚ್‌ಸುದೇ ಅಂವನ ಕೈಂಕರ್ಯ ಆಗಿದ್ದರೆ ರಾಮ ಯಾಕೆ ತನ್ನನೇ ಅಗ್ನಿಪರೀಕ್ಷೆಗೆ ಒಳಪಡ್ಸಿಕಂಡತ್‌ಲ್ಲೆ?

(ii) ಯಾಂವನೋ ಒಬ್ಬ ತಿಳಿಗೇಡಿ ಪ್ರಜೆನ ಸಡ್‌ಲ್ ಮಾತ್‌ನ ಮನ್ಸ್‌ಗೆ ತಕಂಡ್ ಶ್ರೀರಾಮ ಆಗ ಗರ್ಭಿಣಿಯಾಗಿದ್ದ ಸೀತೆನ ಪರಿತ್ಯಾಗ ಮಾಡಿ ಅರಣ್ಯಕೆ ಅಟ್ಟಿತ್ – ಸೀತೆ ಹೇಂಗೆ ಅರಣ್ಯಲಿ ಬೊದ್ಕುದು, ಎಷ್ಟ್ ಕಷ್ಟಪಡಕಾದೆಂತ ಪರ್ಯಾಲೋಚನೆನೂ ಮಾಡದೆ. ಆ ಪರಿಸ್ಥಿತಿಲಿ ಮಗಳ ಪಕ್ಕಲಿ ಇರಿಕೆ ಹೆತ್ತವ್ವೆನೂ ಇದ್ದಿರದ ತಬ್ಬೆಲಿ ಹೆಂಣ್ ಆಕೆ; ಸೀತೆ ಭೂಜಾತೆ!

(iii) ವಾಲ್ಮೀಕಿನ ಆಶ್ರಮಲಿ ಜನ್ಮಪಡ್ದ ಬಾಲಕರ್ ಲವಕುಶರ ಕರ್ಕಂಡ್ ತಾಯಿ ಸೀತೆ ಅಯೋಧ್ಯೆಗೆ ಬಂದ್ ರಾಮನೊಟ್ಟಿಗೆ ಸೇರುವ ಕಾಲನೂ ಬಾತ್. ನಮ್ಮಲ್ಲಿ, ಸಂಶಯನ ಪಿಶಾಚಿಗೆ ಹೋಲ್ಸುದು ವಾಡಿಕೆ. ಕಾರಣ ಇಷ್ಟೆ: ಸಂಶಯನ ಬುಡಿಕೆ ನಾವು ಪ್ರಯತ್ನಿಸಿರೂ ಸಂಶಯಂತೇಳ್ವ ಪಿಶಾಚಿ ನಮ್ಮ ಬುಡಟಿಲ್ಲೆ. ರಾಕ್ಷಸರ ಗೆದ್ದರೂ ಸಂಶಯನ ಗೆಲ್ಲಿಕೆ ಆತ್ಲೆ. ಶೀಲದ ಮೇಲೆನ ಸಂಶಯಂದಳೊ ಅಥವಾ ಬೇರೆ ಯಾದೋ ಮಡಿವಂತಿಕೆನ ನೆವನಂದಳೊ, ಸೀತೆನ ಇನ್ನೊಮ್ಮೆ ಅಗ್ನಿ ಪರೀಕ್ಷೆಗೆ ರಾಮ ಒಳಪಡ್ಸಿತ್; ಆಗ ಅಂವನ ಗೊಂದಲದ ಮನ್ಸ್ ಹೇಂಗಿತ್ತೊ! ಅಗ್ನಿನೋ, ಪರಿಶುದ್ಧದ ಸೀತೆನ ಸ್ಪರ್ಶನೂ ಮಾಡ್‌ತ್ಲೆ, ಬಹುಶಃ ರಾಮನ ಸಂಶಯ ಪಿಶಾಚಿನನೂ ಧ್ವಂಸ ಮಾಡ್‌ತ್ಲೆ.

ಈ ತರದ ಅಗ್ನಿಪರೀಕ್ಷೆಗಳಿಗೆ ಗುರಿಯಾಗ್‌ತ್ತಿದ್ದ ಸೀತೆಗೆ ಬೊದ್ಕ್‌ನ ಮೇಲೆನೇ ಜುಗ್‌ಪ್ಸೆ ಆತ್. ಗಂಡನ ಮೇಲೆ ಯಾವ ಆರೋಪನನೂ ಹೊರ್ಸದ ಪವಿತ್ರ ಮಾತೆ ಇಹದ ಪಯಣದ ಕೊನೆಗೊಳ್ಸಿಕೆ ಸಂಕಲ್ಪಿಸಿತ್; ಭೂಮಾತೆನೇ ದಾರಿ

ತೋರ್ಸಿತ್. ಭೂಮಿಂದ ಜನ್ಸಿದ ಸೀತೆ ಜೀವಂತಳಾಗಿನೇ ಭೂಗರ್ಭ ಸೇರ್ತ್.

ಸರಿ ತಪ್ಪುಗಳ ವಿಮರ್ಶೆಲಿ ತರ್ಕಕ್ಕೆ ಪ್ರತಿತರ್ಕ ಇರ್ದು ಸಹಜ. ಆದರೆ ಹೆಣ್ಣ್‌ನ ಶೋಷಣೆಗೆ ಕೊನೆನೇ ಇಲ್ಲೆನೊ?

[ಎಲ್ಲಾ ಕಾಲಗಳ್ಲೂ ಎಷ್ಟೋ ಪ್ರಬುದ್ಧ ಪತಿಪತ್ನಿಯರ್ ವ್ಯಕ್ತಿ ಸ್ವಾತಂತ್ರ್ಯ, ಸರಿಸಮಾನತೆಗಳ ಅನುಸರ್ಸಿಕಂಡ್ ಪರಸ್ಪರ ಗೌರವಲಿ ಬಾಳ್‌ತ್ತಾ ಇದ್ದವೆ. ಇದ್ ನಿಜವಾಗಿನೂ ಅಂತ ಸಂಸಾರಗಳ ಸೌಭಾಗ್ಯ; ಸಮಾಜದ ಅಭಿವೃದ್ಧಿನ ಸಂಕೇತಗಳ್ಲಿ ಒಂದ್]

4. "ತಾಯಿನ ಕೈಯ್‌ಂದ ಪೆಟ್ಟ್ ತಿಂದ ಮಂಜ ತಾಯಿಗಾಗಿನೇ ಅತ್ತದೆ"- ಇದೊಂದ್ ರೂಢಿಮಾತ್. ಆ ತಾಯಿನೇ ಧನ್ಯೆ !

ಶ್ರೀಕೃಷ್ಣ ಗುರುಕುಲಲಿ ವಿದ್ಯಾಭ್ಯಾಸ ಮುಗ್ಸಿ ಹೊರಡ್‌ಕನ ಗುರು ಸಾಂದೀಪಿನಿ ಶಿಷ್ಯನ ಹರ್‌ಸ್‌ತ್ತಾ ಬೇಕಾದ ವರ ಕೇಳ್‌ಂತ ಹೇಳ್ತ್. ಆಗ ಶ್ರೀಕೃಷ್ಣ ಯಾಚ್‌ಸಿದ ಒಂದೇ ಒಂದ್ ವರ ಇದ್; 'ಮಾತೃ ಹಸ್ತೇನ ಭೋಜನ'. ಹಾಂಗಾಗಿ ಅವತಾರ ಮುಗಿಯಕನ ಮುಟ್ಟ ತಾಯಿ ದೇವಕಿನ ಕೈಯ್‌ಂದ ಊಟ ಮಾಡುವ ಭಾಗ್ಯ ಶ್ರೀಕೃಷ್ಣಂಗೆ ಲಭಿಸಿತ್ತ್.

"ಮಾತೃ ದೇವೋ ಭವ"

✍ಎಂ.ಆರ್. ಅಚ್ಯುತ

"ಶಿಲ್ಪಕುಟಿ"
606, 7ನೇ ಮೈನ್, 3ನೇ ಬ್ಲಾಕ್,
3ನೇ ಸ್ಟೇಜ್, ಬಸವೇಶ್ವರನಗರ,
ಬೆಂಗಳೂರು-560 079,
ಮೊ : 9845553206.

# 2. ಆತ್ಮಹತ್ಯೆ ಮಹಾ ಪಾಪ......

ಕಾಲ ಬದಲಾವಟು, ಹಂಗೆನೇ ಮನ್‌ಷ್ಯನ ಯೋಚನೆಗ ಬದಲಾಗಲಿ. ತಂತ್ರಜ್ಞಾನ ಬದಲಾವುಟು, ಎಷ್ಟೇ ಇದ್ದರೇನ್, ಮನುಷ್ಯನ ಆತ್ಮಹತ್ಯೆನ ನಿಲ್ಸಕೆ ಅಥವಾ ಕಡಿಮೆ ಮಾಡಿಕೆ ಸಾಧ್ಯ ಆತ್ಲೆ. ಹಂಗೇ ಜಾಸ್ತಿನೇ ಆತ್ಮಹತ್ಯೆಗ ನಡೆತಾ ಒಳ. ಪೇಪರ್ ತೆಗ್ದ್ ನೋಡ್ರೇ, ಟಿ.ವಿ. ಹಾಕಿ ನೋಡಿರೆ ಅದ್ರಲ್ಲಿ ಆತ್ಮಹತ್ಯೆ ನ್ಯೂಸ್ ಇದ್ದೇ ಇದ್ದದೆ. ಪ್ರಪಂಚಲಿ ನಾಲ್ಕ್ ನಿಮಿಷಕ್ಕೊಂದ್ ಆತ್ಮಹತ್ಯೆ ನಡ್ದದೆ. ಪ್ರತಿವರ್ಷ 8,00,000 ಜನ ಆತ್ಮಹತ್ಯೆಂದ ಸತ್ತವೆ. ಅದ್ರಲ್ಲಿ 17% ಭಾರತದವು ಆಗಿದ್ದವೆ. ಆತ್ಮಹತ್ಯೆನಾ ಹತೋಟಿಗೆ ತಾಕೆ ಪ್ರತಿವರ್ಷ ಸೆಪ್ಟೆಂಬರ್ 10 ರಂದ್ "ವಿಶ್ವ ಆತ್ಮಹತ್ಯಾ ತಡೆಗಟ್ಟುವಿಕೆ ದಿನ" ಅಂತ ಆಚರಣೆ ಮಾಡ್‌ವೆ.

ಆತ್ಮಹತ್ಯೆ ಅಂತ ಹೇಳ್ರೆ ತನ್ನನ ತನ್ನ ಇಚ್ಚೆಂದ ಕಳ್ಕಂಬೊದ್ ಅಂತ ಅರ್ಥ. ಇಷ್ಟೆಲ್ಲಾ ಆತ್ಮಹತ್ಯೆ ಅದಕ್ಕೆ ಕಾರಣಗಳ ನೋಡಿಕೆ ಹೋದರೇ, ಸುಮಾರ್ ಇದ್ದದೆ. ಅವರವರ ವೈಯಕ್ತಿಕ ವಿಚಾರ, ಸಾಮಾಜಿಕ ವಿಚಾರ ಇತ್ಯಾದಿಗ. ಈಗ ಕಾಂಬೋದ್ ರೈತರ ಆತ್ಮಹತ್ಯೆಗ ಜಾಸ್ತಿ. ಹಂಗೇ ಯುವ ಜನ್ರ ಆತ್ಮಹತ್ಯೆ, ಮಕ್ಕಳ ಆತ್ಮಹತ್ಯೆನ ಕಾಂಬಕ್. ಇದಕ್ಕೆಲ್ಲ ಕಾರಣಗಳ ನೋಡಿಕೆ ಹೋದರೆ ಸುಮಾರ್ ಇದ್ದದೆ. ಅದ್ರಲ್ಲಿ ಮುಖ್ಯವಾಗಿ ಮನ್‌ಷ್ಯನ ಮಾನಸಿಕ ಸ್ಥಿತಿ. ಬ್ಯುಸಿನೆಸ್ ನಷ್ಟ ಆದರೆ, ಕೃಷಿ ಹಾಳಾದರೆ ಮಂಡೆ ಬೆಚ್ಚ ಮಾಡ್ಕಂಬೊದು, ತಡೆಕೆ ಬೊತ್ತಾದ ಬೇನ ಇದ್ದರೆ, ಗೂಡೆ ಹೈದಂಗಳಲ್ಲಿ ಲವ್ ಫೆಲ್ಯೂರ್ ಅಂತ ತಲೆ ಹಾಳ್ ಮಾಡ್‌ಕಂಬೋದ್. ಇದನ್ನೆಲ್ಲ ತಲೆಲಿ ಇಸಿಕಂಬೋದ್. ಇದ್ ಕಾಲಕ್ರಮೇಣ ಖಿನ್ನತೆಗೆ ಹೋದೆ. ಈ ಸ್ಥಿತಿಲಿ ಅವ್ ಏನ್ ಮಾಡ್ವೇಂತ ಅವುಕ್ಕೆ ಗೊತ್ತಾದುಲೆ. ಮುಂದೆ ಒಂದ್ ದಿನ ಸಾಯುವ ನಿರ್ಧಾರ ತಕಂಡವೆ.

ಇಂತವು ನಮ್ಮ ನಿಮ್ಮ ಸುತ್ತ ಇದ್ದವೆ. ಅದ್ ನಾವುಗೆ ಅಷ್ಟ್ ಬೇಗ ಗೊತ್ತಾದುಲೆ. ಆದ್ರೂ ಕೆಲವೊಮ್ಮೆ ಅವರ ನಡವಳಿಕೆ ನೋಡ್ರೆ ಗೊತ್ತಾದೆ.

ಎರಡ್ ವಾರಂದ ಜಾಸ್ತಿ ಮಂಡೆ ಬೆಚ್ಚಲಿ ಇರ್ದು, ಫ್ರೆಂಡ್ಸ್‌ಂದ, ಮನೆ ಅವ್ರ್‌ಂದ ದೂರ ಇರ್ದು, ಕೆಲ್ಸಕ್ಕೆ ಹೋಗದೆ ಕುದ್ಕಂಡು, ಸರಿ ನಿದ್ದೆ ಮಾಡದೆ ಕುದುರ್ದು, ಸರಿ ಹೊಟ್ಟೆಗೆ ತಿನ್ನದೆ ಕುದುರ್ದು, ಬೇಗ ಬೊಚ್ಚುದು, ತನ್ನ ಶಕ್ತಿನ ಕಳ್ಕಂಡಾಂಗೆ ಆಡ್ದು, ಸಾಯಕ್ಕೆ ಪ್ರಯತ್ನ ಮಾಡ್ದು, ಬೇಗ ಕೋಪ ಮಾಡ್ಕ್ಂಬೊದು, ಕೆಲವೊಮ್ಮೆ ಸುಮ್ಮನೆ ಕೆಲ್ಸ ಮಾಡದೆ ಇರ್ದು, ಇತ್ಯಾದಿಗ. ನಾವು ಇಂತವರ ಬಗ್ಗೆ ಗಮನ ಹರ್ಸುದು ನಮ್ಮ ಕೆಲ್ಸ. ಇಂತವರ ಮುಂದೆ ಕೆಲವು ಅಪಾಯದ ವಸ್ತುಗಳ್‌ನ ಕಾಂಬಂಗೆ ಇಸಿಕಾಗದ್.

ಯಾರ್ ಯಾರ್ ನಮ್ಮ ನಿಮ್ಮ ಫ್ರೆಂಡ್ಸ್‌ಗ ಅಥವಾ ಫ್ಯಾಮಿಲಿ ಸಂಬಂಧದವು ಸಾಯುವ ನಿರ್ಧಾರಕ್ಕೆ ಬಂದಿದ್ದರೆ, ಅವರಕ್ಕಲೆ ಹೋಗಿ ಸರಿಯಾಗಿ ಮಾತಾಡೊಕು. ಅವು ಯಾಕೆ ಈ ನಿರ್ಧಾರಕ್ಕೆ ಬಂದಳಂತ ಸರಿ ತಿಳ್ಕಂಬೊಕು. ಅವರೊಟ್ಟಿಗೆ

ಆತ್ಮಹತ್ಯೆನ ಅಭಿಪ್ರಾಯನ ತಿಳ್ಕಂಬೊಕು. ಅವುಕ್ಕೆ ಧನಾತ್ಮಕ ಚಿಂತನೆನ ಹೇಳೊಕು.

ಮಾನಸಿಕ ಒತ್ತಡ ಜಾಸ್ತಿ ಇದ್ದರೆ, ಇದ್ ಖಿನ್ನತೆಗೆ ದಾರಿಯಾದೆ. ಅವುಕ್ಕೆ ಸಾಯೊಕುಂತ ಮನಸಿಲಿ ಇದ್ದದೆ. ಅಂತವು ನಮ್ಮ ಕುಟುಂಬದ ಸದಸ್ಯರ್, ಅಥವಾ ದೋಸ್ತಿಗಳ್ ಆಗಿದ್ದವೆ. ಅಂತವರ ಮನೆಲಿ, ಸಂಬಂಧಿಗಳೊಟ್ಟಿಗೆ ಅವರ ಬಗ್ಗೆ ಕೇಳಿ ತಿಳ್ಕಂಬೊಕು. ಇದ್ ಅವರ್‌ನ ಸಾಯುವ ನಿರ್ಧಾರಂದ ಹೊರಗೆ ತಾಕೆ ತುಂಬಾ ಉಪಕಾರ ಆದೆ.

ಆಮೇಲೆ ತಕ್ಷಣ ನರತಜ್ಞ ಅಥವಾ ಆಸ್ಪತ್ರೆಗೆ ಹೋಗಿ ಅವುಕ್ಕೆ ಕೌನ್ಸಿಲಿಂಗ್ ಕೊಡೊಕು. ಅವರ್ಲಿ ಇರುವಂತ ಮಾನಸಿಕ ಒತ್ತಡನ ಸ್ವಲ್ಪ ಮಟ್ಟಿಗೆಯಾರ್ ಕಡಿಮೆ ಮಾಡಿಕೆ ನೋಡೊಕು. ಅಥವಾ ಬೇಕಾದ ಚಿಕಿತ್ಸೆ ಕೊಟ್ಟು ಅವರ್‌ನ ಮೊದ್ಲಿನಂಗೆ ಮಾಡಿಕೆ ನೋಡೊಕು.

ಅವುಕ್ಕೆ ಬರಿ ಆಸ್ಪತ್ರೆ ಮೊದ್ದುಂದ ಖಿನ್ನತೆ ಬಾರಿ ಬೇಗ ಕಡಿಮೆ ಆದೇಂತನು ಹೇಳಿಕೆ ಆದುಲೆ. ಅದರೊಟ್ಟಿಗೆ ಆಧ್ಯಾತ್ಮಿಕ ಚಿಂತನೆಯ ಅರಿವು ಅವುಕ್ಕೆ ಮಾಡ್ಸೊಕು. ಹಿಂಗೇ, ಅವುಕ್ಕೆ ಧನಾತ್ಮಕ ಚಿಂತನೆಯ ಪರಿವು ಇರೊಕು. ಜೀವನದ ಮೂಲ ಉದ್ದೇಶನ ಅರ್ಥ ಮಾಡ್ಸೊಕು. ಹಿಂಗೇ ಮುಂದೆ ಜೀವನಲಿ ಆತ್ಮಹತ್ಯೆನ ಮಾಡಿಕೆ ಯೋಚನೆನೂ ಮಾಡಿಕೆ ಬೊತ್ತು. ಅವು ಜೀವನಲಿ ಏನಾರ್ ಒಂದ್ ಸಾಧನೆ ಮಾಡಿಕೆ ಕೈ ಜೋಡ್ಸೊಕು.

ಯೋಗ ಅಂತ ಹೇಳ್ರೆ ಬರಿ ಆಸನಕ್ಕೆ ಸೀಮಿತ ಅಲ್ಲ. ಅದ್ ಮನುಷ್ಯನ ಜೀವನ ಕ್ರಮ. ಯೋಗದ ಒಳಚಿಂತನೆನ ಮನ್‌ಷ್ಯಂಗೆ ಅರಿವು ಮೂಡ್ಸೋಕು. ಯೋಗ ಧನಾತ್ಮಕ ಚಿಂತನೆನ ಹೇಳಿದೆ, ಜೀವನದ ಉದ್ದೇಶನ ಹೇಳಿದೆ. ಮನ್‌ಷ್ಯನ ಅಂತರಂಗ ಶಕ್ತಿನ ಜಾಗೃತಿಗೊಳ್ಸಿದೆ.

ಪ್ರಾಣಯಾಮನ ಅಭ್ಯಾಸ ಮಾಡ್ಸೊಕು. ಇದ್ ಮಾನಸಿಕ ಶಕ್ತಿ ಮತ್ತೆ ಪ್ರಾಣಶಕ್ತಿನ ಒಂದ್ ಮಾಡಿಕೆ ಸಹಾಯ ಆದೆ. ಅವುಕ್ಕೆ ವ್ಯಾಯಾಮನ ಅಭ್ಯಾಸ ಮಾಡ್ಸೊಕು. ಹಿಂಗೆ, ಅವರ ಮನಸ್‌ನ ನಿಯಂತ್ರಣಕ್ಕೆ ತಾಕೆ ಆದೆ.

ಜೀವನ ಕ್ರಮನ ಸರಿ ಮಾಡಿಕೆ ನೋಡೊಕು. ಅವರ ಆಹಾರ ಕ್ರಮನ ಸರಿ ಮಾಡೊಕು. ಆರೋಗ್ಯಯುತ ಆಹಾರದ ಬಗ್ಗೆ ಸಲಹೆ ಕೊಡೊಕು. ಮಾನಸಿಕ ಸ್ಥಿತಿ ಸರಿ ಇತ್ಲರೆ ಎಲ್ಲವು ನಿದ್ದೆ ಸಮಸ್ಯೆನ ಅನುಭವಿಸಿವೆ. ಅಂತವರ ನಿದ್ದೆ ನಮೂನೆನ ಸರಿ ಮಾಡೊಕು. ಪ್ರಕೃತಿ ಜೊತೆ ಒಡನಾಟ ಇದ್ದರೆ, ಅದೇ ಒಂದು ದೊಡ್ಡ ಔಷದಿ. ಅದ್ ಮನ್‌ಷ್ಯನ ಮನಸ್ಸಿಗೆ ಒಳ್ಳೆಯ ವಾತಾವರಣ ತಂದ್ ಕೊಟ್ಟದೆ. ದಿನಕ್ಕೆ ಅರ್ಧ ಗಂಟೆಯಾರ್ ಪ್ರಕೃತಿ ಜೊತೆ ಇದ್ದರೆ, ನಮ್ಮ ಮನಸ್ಸ್ ಪ್ರಕೃತಿನಷ್ಟ್ ತಂಪಾದೆ.

ಹಿಂಗೇ, ಆತ್ಮಾಹತ್ಯನ ತಡೆಗಟ್ಟಿಕೆ, ಆದಷ್ಟ್ ನಮ್ಮ ಕೈಲಾಗುವಂತ ಸಹಾಯನ ನಾವು-ನೀವು ಮಾಡೊಕು. "ಆತ್ಮಹತ್ಯೆ ಮಹಾಪಾಪ".... ಅಂತ ಜನ್ರಿಗೆ ಮನವರಿಕೆ ಆಗುವಂತೆ ಮಾಡೊಕು.

✍ಗ್ರೀಷ್ಮಾ ಗೌಡ ಅರ್ನೋಜಿ.

III[rd] ನ್ಯಾಚುರೋಪತಿ ಮತ್ತು ಯೋಗಿಕ್ ಸೈನ್ಸ್
ಆಳ್ವಾಸ್ ಕಾಲೇಜು, ಶೋಭವನ ಕ್ಯಾಂಪಸ್,
ಮೂಡುಬಿದಿರೆ, ದ.ಕ.

# 3. ಅರ್ಥ ಮಾಡುಸುದು ಕಷ್ಟ.

ನೀವ್ ಏನೇ ಹೇಳಿ ಒಂದಂತ್ ಸತ್ಯ. ಇದ್ ಗೊತ್ತಿರುವ ವಿಚಾರ. ಒಂದ್ ವಿಚಾರನ ಒಬ್ಬ ಮೊನ್‌ಷಂಗೆ ಅರ್ಥ ಮಾಡ್ಸುದು ಅಷ್ಟ್ ಸುಲ್ಬದ ಕೆಲ್ಸ ಅಲ್ಲ. ಕೆಲವ್ ಜನಗ ಬುದ್ಧಿ ಶಕ್ತಿಗೆ ಸವಾಲಾಗಿ ನಿತ್ತವೆ. ನೀವು ಹೆಂಗೆಂಗೊ ಬುಡ್ಸಿ ಹೇಳಿರು ಅವ್ ಅವರ ಅಭಿಪ್ರಾಯನ ಬದಲಾಯ್ಸಿದುಲೆ. ಯಾಕೆ ಅವ್ಕೆ ಆಲುಸುವಷ್ಟ್ ಶಕ್ತಿ ಇರ್ದುಲೆ, ತಾಳ್ಮೆ ಇರ್ದುಲೆ. ನಾ ಹಿಡ್ದ ಮೊಲಕ್ಕೆ ಮೂರೇ ಕಾಲ್! ಕೆಲವ್ ಊರ್‌ಗಳಿಗೆ ಹೋಲ್ಸಿರೆ ನಮ್ಮ ಊರ್ ಎಷ್ಟ್ ಗಲೀಜ್ ಅಲಾತ ಹೇಳಿರೆ ಸಾಕ್. ನಮ್ಮ ಊರ್‌ಲಿ ಜನಸಂಖ್ಯೆ ಜಾಸ್ತಿ ಅಲಾ. ಎಲ್ಲಾ ಕ್ಲೀನಾಗಿ ಇಸಿಕೆ ಕಷ್ಟತ ಹೇಳುವೆ.

ತಿಂಬೊದಿಕೆ ಉಂಬೊದಿಕೆ ತೊಂದರೆ ಆಕೆ ಕಾರಣ ಜನಸಂಖ್ಯೆ. ಹೇಳ್ದು ಸರಿ. ಆದರೆ ನಮ್ಮ ಪರಿಸರನ ಲಾಯ್ಕಾಗಿ (ಕ್ಲೀನಾಗಿ) ಇಸಿಕೆ ನಾವು ಮನ್ಸ್ ಮಾಡೊಕಲ್ಲದೆ ಜನಸಂಖ್ಯೆ ಏನ್ ಮಾಡ್ದೆ?

ನೂರಾರ್ ಮಕ್ಕ ಇರುವ ಶಾಲೆಲಿ ಸ್ವಚ್ಛತೆ ಇದ್ದದೆ. ಆದರೆ ಸಂಬಂದಪಟ್ಟ ಅಧಿಕಾರಿಗಳ ಕಛೇರಿಲಿ ಸ್ವಚ್ಛತೆ ಇರ್ದುಲೆ ಯಾಕೆ? ಜನಸಂಖ್ಯೆ ಹೆಚ್ಚು ಆದಲ್ಲಿ ಆಕಾಶ ನೋಡಿಕೆ ನೂಕ್‌ನುಗ್ಗಲ್ ಆದು ಸಾಧ್ಯನಾ?

ಕೇಳಿರೆ ಸರ್ವಥಾ ಒಪ್ಪುದುಲೆ. ಮತ್ತೆ ಕೆಲವ್ಕೆ ನಾವು ಹೇಳ್ದು ಅರ್ಥ ಆದೆ. ಆದರೆ ಅವ್ಕೆ ನಮ್ಮ ಕಾಲ್ ಎಳಿವ ಕೆಲ್ಸ ತಾನೇ. ವಿದ್ಯಾವಂತರ್ ಬುದ್ಧಿವಂತರ್ ತ ತೋರ್ಸುವ ಆಸೆ. ಹಂಗಾಗಿ ನಮ್ಮ ಮಾತ್ ಮುಗಿಯಕೆ ಮುಂದೆ ನಮ್ಮ ಬಾಯಿಗೆ ಅಡ್ಡ ಬಂದ್ ಹಂಗೆ ಅಲ್ಲ ಹಿಂಗೆತ್ತೇಳಿ ನಮ್ಮ ಸೊರ ಎತ್ತಿಕೆ ಬುಡ್ದುಲೆ.

ಇನ್ನ್ ಕೆಲವ್ಕೆ ನಮ್ಮ ಮಾತ್‌ನ ಭಾವನೆ ಏನ್ ಉಟ್ಟುತ ತಿಳ್ಕಂಬಕೆ ಆದುಲೆ. ಒಮ್ಮೆ ನಮ್ಮ ಸಂಬಂಧದವ್ ನನ್ನ ಅಪ್ಪನ ಅಂಗವಿಕಲತೆನ ಹೇಳ್‌ಕನ ನಾ ಹೇಳ್ದೆ:

ಅದ್ ಅವರ ತೊಪ್ಪ್ ಅಲ್ಲ. ಅದೆಲ್ಲಾ ದೇವರ ಇಚ್ಛೆ ಹಿಂಗೆಲ್ಲಾ ಹೇಳಿ ಅವರ ಮನ್ಸ್‌ಗೆ ಬೇಜರ ಮಾಡ್ಸಿಕೆ ಆಗದ್. ನಾ ಹೇಳ್‌ಕನ ಅವ್ ಹೌದ್ ಹೌದ್‌ತ ತಲೆ ಆಡ್ಸಿದೊ.

ಅಲ್ಲ ನಾ ಹೇಳ್ದರ್ಲಿ ತೊಪ್ಪೆನ್ ಉಟ್ಟು. ಅವ್ಕೆ ನಮ್ಮ ಹಂಗೆ ಎಲ್ಲಾ ಸರಿ ಇದ್ದಿದ್ದರೆ ನಾ ಯಾಕೆ ಹಂಗೆ ಹೇಳಿನೆ. ತಿರ್ಗಿ ನನ್ನನ್ನೇ ಕೇಳ್ದೊ. ಅಂತವ್ಕೆ ಏನ್ ಉತ್ತರ ಹುಡ್ಕುದು. ಮತ್ತೊಮ್ಮೆ ನನ್ನ ಪ್ರೆಂಡ್ ಶೈಲಜ ಅವ್ ಅವರ ಕೆಲ್ಸದ ಮೇಲೆ ಪೇಟೆಗೆ ಹೋಗಿದ್ದೊ. ಅಲ್ಲಿ ಅವ್ಕೆ ನಮ್ಮ ಊರ್‌ನವರ ಒಬ್ಬರ ಪರ್ಚಯ ಆತ್. ಅವ್ ನನ್ನ ಹೆಸರ್ ಹೇಳಿ ಅವ್ ತುಂಬಾ ಬರ್ದವೆ ಅಲಾತ 'ಕೇಳ್‌ಕನ ಬರಿಯದೆ ಅದ್ಕೆ ಬೇರೆ ಕೆಲ್ಸ ಬೇಕಲಾ'. ಅಂದರೆ ಓದುದು ಬರಿಯುದು ಏನೂ

ಕೆಲ್ಸ ಇಲ್ಲದವಾತ ಕೇಳ್‌ಕನ ಓ ನೀವೂ ಕೂಡ ಬರ್ದರೆನಾ. ನಾವ್ಗೆಲ್ಲ ಅದ್ಕೆ ಪುರುಸೊತ್ತ್ ಇಲ್ಲೆ.

ಅಂತವ್ಕೆ ಏನ್ ಹೇಳೊಕುತ ಗೊತ್ತಾದ್ಲೆ. ಇನ್ನೊಂದ್ ತರದ ಜನಗಳಿಗೆ ನಮ್ಮ ಉದ್ದೇಶನ ಅರ್ಥಮಾಡಿಕೆ ಮುಂದೆ ನಮ್ಮ ಮೇಲೆ ಹಾರಿ ಬಿದ್ದವೆ.

ನೀವ್ ಓಡಾಡ್‌ಕನ ನಿಗ ಇಸಿ ಓಡಾಡಿ. ಈಗನವರ ತಲೆಗ ಸರಿ ಇರ್ದುಲೆ ಅಂತವರ ಎಡೆಲಿ ನೀವ್ ಹಿಂಗೆ ಓಡಾಡಿರೆಲಾ. ಆಗುವ ತೊಂದರೆನ ನೀವೇ ಅನುಭವಿಸೊಕು. ಇಷ್ಟ್ ಹೇಳ್‌ಕನ ಮೈ ಮೇಲೆ ದೆವ್ವ ಬಂದವರ ಹಂಗೆ ನೀವೂ ಒಂದ್ ಹೆಣ್ಣ್ ಆಗಿ ನಮ್ಮ ಮೇಲೆ ನೆಂಜಿ ಕಾರ್ದು ಸರಿಯಾ?

ಸರ್ರನ ಕೊಣ್ಣಿ ಹೇಳುವೆ.

ನೆಂಜಿ ಕಾರ್ದು ಅಲ್ಲ ನಿಮ್ಮ ಒಟ್ಟಿಗೆ ಚಿನ್ನ ಉಟ್ಟು ಹಂಗೆ ಹಾಕಂಡ್ ಹೋದರೆ ಕದಿಯಕೆ ಕಳ್ಳರ್‌ಗೆ ಸುಲ್ಬ ಆದೆ. ಹೇಳಿಕೆ ಮುಂದೆ ಕಣ್ಣ್ ಕೆಂಪು ಮಾಡಿ ಹೊರ್ಟ್ ಹೋಗಿದ್ದವೆ.

ಸಾಕ್ರಟಿಸ್ ಅಂದು ಇಂದುಗಳೆರಡಕ್ಕೂ ಸಲ್ಲುವ ಮಹಾಜ್ಞಾನಿ. ಒಮ್ಮೆ ಅವರ ಪರಿಚಿತ ಒಬ್ಬ ಕಾಂಬಕೆ ಬಂದ್ ಹಿಂಗೆ ಹೇಳ್ತ್:

"ಸ್ವಾಮಿ, ನಿಮ್ಮ ಶಿಷ್ಯನೊಬ್ಬನ ಬಗ್ಗೆ ಕೆಲವು ಮಾತು ಕೇಳಿದೆ. ನಿಮಗೆ ತಿಳಿಸುವುದು ಸೂಕ್ತ ಎನಿಸಿತು"

ಆಗ ಸಾಕ್ರಟಿಸ್:

"ಒಂದು ನಿಮಿಷ ತಡೆಯಿರಿ. ನೀವು ಹೇಳಲಿರುವ ಆ ವಿಷಯಗಳನ್ನು ಕೇಳುವ ಮೊದಲು ಮೂರು ಬಾರಿ ಶೋಧಿಸುವುದು ಉತ್ತಮ. ಇದರಿಂದ ಮಾತು ವ್ಯರ್ಥವಾಗುವುದಿಲ್ಲ. ಹರಟೆಯಾಗುವುದಿಲ್ಲ. ಅದರ ಸತ್ಯಾಸತ್ಯತೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಏನನ್ನುತ್ತೀರಿ?"

ಹೇಳ್‌ಕನ, ಸರಿ, ಒಪ್ಪಿತ್ತ್ ಪರಿಚಿತ.

ಸಾಕ್ರಟಿಸ್ ಕೇಳ್ದ ಸುರುನ ಪ್ರಶ್ನೆ :

"ನೀವೀಗ ನನಗೆ ಹೇಳಲು ಹೊರಟ ವಿಷಯ ನೂರಕ್ಕೆ ನೂರರಷ್ಟು ಸತ್ಯವೆ? ಸರಿಯಾಗಿ ಯೋಚಿಸಿ ಹೇಳಿ."

ಕೇಳ್‌ಕನ ಪರಿಚಿತ ಹಿಂಗೆ ಹೇಳ್ದೆ :

"ಹಾಗೇನೂ ಇಲ್ಲ ಯಾರೋ ಹಾಗೆಂದರು. ಅದನ್ನು ಕೇಳಿದೆ ನಾನು", ಮಾತ್‌ನ ಅರ್ಥಕ್ಕೆ ನಿಲ್ಸಿತ್.

"ಯಾರೊ ಹೇಳಿದ್ದನ್ನು ಕೇಳಿ ನೀವು ಬಂದಿರಿ, ಇದು ಸತ್ಯವೋ ಅಲ್ಲವೋ ಎಂಬುದರ ಬಗ್ಗೆ ನಿಮಗೆ ತಿಳಿದಿಲ್ಲ ಎಂದಾಯಿತು".

ಎರಡನೆ ಪ್ರಶ್ನೆ :

"ನೀವು ಹೇಳಲಿರುವ ಮಾತು ಒಳ್ಳೆಯದೆ ಅಲ್ಲವೇ"? ಪ್ರಶ್ನೆ ಮಾಡ್ದೊ ಸಾಕ್ರಟಿಸ್.

ಪರಿಚಿತನ ಮಾತ್‌ಲಿ ಅನುಮಾನ

"ಸ್ವಾಮಿ ನಾನು ಹೇಳಲಿರುವ ವಿಷಯ ಒಳ್ಳೆಯದೇನೂ ಇಲ್ಲ. ಕೆಟ್ಟದ್ದೇ ಎನ್ನಬಹುದು". "ಆದರೆ ಸತ್ಯವೆಂದು ತಿಳಿದಿಲ್ಲವಾದರೂ ಕೆಟ್ಟ ಮಾತನ್ನು ಹೇಳಲು ಹೊರಟಿರುವಿರಿ ಎಂದು ತಿಳಿಯಲೆ?" ಹೋಗಲಿ ಬಿಡು ಮೂರನೆಯ ಪ್ರಶ್ನೆಗೆ ಉತ್ತರಿಸಬಹುದೇ ನೋಡು. "ನೀನು ಹೇಳಲಿರುವ ಮಾತು ನನ್ನ ಶಿಷ್ಯನಿಗೆ ಏನಾದರೂ ಉಪಯೋಗವಾಗಬಹುದೆ?"

ಕೇಳ್‌ಕನ ಪರಿಚಿತನ ಬಾಯಿಂದ ಮಾತೇ ಹೊರ್‌ಟ್ಲೆ.

ಸಾಕ್ರಟಿಸ್ ಹಿಂಗೆ ಹೇಳ್ದೊ. "ಗೆಳೆಯ, ಸತ್ಯಕ್ಕೆ ದೂರವಾದ, ಯಾರಿಗೂ ಉಪಯೋಗಕ್ಕೆ ಬಾರದ ಕೆಟ್ಟ ಮಾತುಗಳಿಂದ ಏನು ಸಾರ್ಥಕ? ಇದರಿಂದ ಆಡುವವನಿಗೂ, ಕೇಳುವವನಿಗೂ, ವಿಷಯಕ್ಕೂ ಧಕ್ಕೆಯಾಗುತ್ತದೆ. ಸಮಯ, ಶಕ್ತಿ ವ್ಯರ್ಥವಾಗುತ್ತದೆ. ಆದ್ದರಿಂದ ನಾವು ಮಾತನಾಡುವ ಮುನ್ನ ತಾಳ್ಮೆಯಿಂದ ಆಲೋಚಿಸಿ ಮಾತನಾಡಬೇಕು." ಹೇಳಿದ್ದೊ ಸಾಕ್ರಟಿಸ್.

ಹೌದ್ ಒಂದ್ ವಿಷಯನ ಬೇರೆವ್ಕೆ ಹೇಳಿಕೆ ಮುಂದೆ ಅದರ ನಾವ್ ಸರಿಯಾಗಿ ತಿಳ್ದಿರೊಕು. ಅರ್ಥ ಮಾಡ್ಸಿಕೂ ಅರ್ಥ ಮಾಡ್ಸುದು ಅಗತ್ಯ ಉಟ್ಟಾತ ನಾವ್ಗೆ ಗೊತ್ತ್‌ಬೇಕು.

ಕೆಲವ್ ಮಾತ್‌ಗ ವಾದಕ್ಕೆ ತಿರ್‌ಗಿ ಬಿದ್ದದೆ. ಅರ್ಥ ಮಾಡ್ಸ್‌ತ ಇರುದಾ ಅಲ್ಲ ವಾದ ನಡಿತಾ ಉಟ್ಟಾತ ನಾವ್ಗೆ ಆಲೋಚನೆ ಬೇಕು. ನಾವ್ ವಾದಲಿ ಗೆದ್ದೊತ ಆದರೆ, ಅವನ ಮನ್ಸ್‌ಲಿ ಸಣ್ಣವ್ ಆಗೊಳತ ಅರ್ಥ!.

ನಮ್ಮ ಮನ್ಸ್‌ಲಿ ತಾಳ್ಮೆ ಇದ್ದರೆ ಬೇರೆವರ ಮಾತ್‌ನ ಆಲ್ಸುವ ಮನ್ಸ್ ನಮ್ಮದಾದೆ.

ಅದ್ ಇಲ್ಲದೇ ಹೋದರೆ, ದಾರ್ಶನಿಕರ್ ಹೇಳ್ದ ಹಂಗೆ :

"ಸೋಮಾರಿಗಳ ಮನಸ್ಸು ದೆವ್ವದ ಕಾರ್ಖಾನೆ ಇದ್ದಂತೆ" ಇದ್ಕೆ ಸಂಶಯನೇ ಇಲ್ಲೆ.

✍ಉದಯಕುಮಾರಿ ಚೆಂಬು

ಬಾಲಂಬಿ ಅಂಚೆ,
ಎಂ. ಚೆಂಬು ಗ್ರಾಮ,
ಚಲನವಾಣಿ : 9632900436.

ಹಿನ್ನೋಟ

# ಹಿಂದೆ ಹಿಂಗಿತ್ತ್

ಹಿಂದಿನ ಕಾಲದಲ್ಲಿ ಒಂದು ಗಂಡಿಗೆ ಹೆಣ್ಣ್ ಹುಡುಕಿ, ಮದುವೆ ಮಾಡಕ್ಕೊರೆ, ಹತ್ತು ಮೈಲು, ಹದಿನೈದು ಮೈಲು ನಡೆದು ಹೋಕಾಗಿತ್. ಗೂಡೆನ ಮನೆಗೆ ಹೋಗಿ ಹೈದ ಗೂಡೆನ ಕುಷಿ ಆದರೆ ಗೂಡೆಗು ಹೈದನ ಕುಷಿಯಾದರೆ, ಎಲ್ಲಾವುಕು ಕುಷಿಯಾತ್ತ್. ಅದರಲ್ಲಿ ಅವರ ಗಣ ಕೂಟ ಸರಿ ಬರದಿದ್ದರೆ, ಹೈದನಕಡೆ ಹತ್ತು ಹದಿನೈದು ಮೈಲು ದೂರ ನಡೆದದ್ದೆ ಬಾತ್. ಆಗನ ಕಾಲಲ್ಲಿ ಹೈದಂಗೆ ಗೂಡೆಗೆ ಮದುವೆ ಮಾಡ್ಕೊರೆ ಅಷ್ಟ್ ಕಷ್ಟ ಇತ್ತ್. ಹಿಂದಿನ ಕಾಲಲ್ಲಿ ಮತ್ತೊಂದು ಇತ್ತ್. ಅಜ್ಜ ಅಜ್ಜಿ ಇದ್ದರೆ ಗೂಡೆನ ಹೈದ ನೋಡಿಕೆ ಬಂದರೆ ಅಜ್ಜ ಅಜ್ಜಿಗೆ ಹೈದನ ಕುಷಿಯಾದರೆ ಮಾತ್ರ ಮದುವೆ ಮಾಡಿ ಕೊಡುತ್ತಿದ್ದೊ. ಹೈದನ ಕುಷಿ ಉಟ್ಟತ್ತ ಗೂಡೆನ ಕೇಳುವ ಪ್ರಶ್ನೆ ಇಲ್ಲೆ.

ಈಗಿನ ಕಾಲಲಿ ಒಂದು ಗಂಡಿಗೆ ಹೆಣ್ಣು ಹುಡುಕಿಕೆ ಹೋಕೆ ಕಾರು ಜೀಪು ಉಟ್ಟು. ಎಷ್ಟೊಂದು ಸುಲಭ. ಈಗನ ಕಾಲಲ್ಲಿ ಹೈದಂಗು ಗೂಡೆಗು ಇಷ್ಟ ಇದ್ದರೆ ಮಾತ್ರ ಅಪ್ಪ ಅವ್ವ ಮದುವೆ ಮಾಡಿಕೊಡಕು. ಹಿಂದಿನ ಕಾಲಲ್ಲಿ ಗೂಡೆಗೆ ಹದಿನೈದು ವರ್ಷ ಹದಿನಾರು ವರ್ಷ ಆದರೆ ಸಾಕ್. ಮತ್ತೆ ಅವರನ್ನ ಮದುವೆ ಮಾಡಿ ಕೊಡುವ ಕೆಲಸ. ಹಿಂದಿನ ಕಾಲದ ಗೂಡೆಗಳಿಗೆ ಸರಿಯಾಗಿ ಅಡಿಗೆ ಕೆಲಸ ಗೊತ್ತಿರುದಿಲ್ಲೆ. ಸಣ್ಣ ವಯ್ಸಲಿ ಮದುವೆ ಮಾಡಿಕೊಡ್ದು. ಹೆಣ್ಣುಮಗಳು ಅತ್ತೆ ಮನೆಲ್ಲಿ ಕತ್ತೆ ದುಡಿದಂಗೆ ದುಡಿಯಕು. ಅತ್ತೆ ಹೇಳ್ದಂಗೆ ಕೇಳಕು ಕೆಲಸ ಮಾಡಕು. ಕೆಲಸ ಮಾಡದಿದ್ದರೆ, ಮಾಂವನ ಹಿಂಸೆ ಬೇರೆ, ನಾದಿನಿಯ ಹಿಂಸೆ. ಎಲ್ಲಾವರ ಹಿಂಸೆ ತಡೆದುಕೊಂಡು ಬದಕಕ್ಕೂ ಹಿಂದಿನ ಕಾಲ. ಹಿಂದಿನ ಕಾಲಲ್ಲಿ ಮೈಯಿಗೆ ಒಳ್ಳೆಯ ಬಟ್ಟೆ ಹಾಕುದಿಲ್ಲೆ, ಕಾಲಿಗೆ ಚಪ್ಪಲ್ ಇಲ್ಲೆ, ಬರಿಕಾಲಲ್ಲಿ ಹತ್ತು ಮೈಲು ಆದರು ಸರಿ ಹದಿನಾಲ್ಕು ಮೈಲು ಆದರು ಸರಿ ಕಲ್ಲ್ ಮುಳ್ಳು ಚುಚ್ಚಿಸ್ಕಂಡ್ ನಡೆಯುವ ಕಾಲ.

ಹಿಂದಿನ ಕಾಲಲ್ಲಿ ಮದುವೆ ಆಗಿ ಒಂದು ಕೂಸು ಆಕನ, ಆ ಕೂಸುಗೆ ಯಾವ ಕೂಸುನಾದರು ಸರಿ ಹಳೆ, ಬಟ್ಟೆನೆ ಹಾಕುದು. ಈಗಿನ ಕಾಲದ ಮಕ್ಕಳಿಗೆ ಕೂಸು ಹುಟ್ಟಿದಂಗೆ ಹೊಸ ಬಟ್ಟೆ ಹಾಕುವೆ. ಹಿಂದಿನ ಕಾಲದ ಆದ ಹೋದ ಸಂಗತಿಗಳ ನನ್ನ ಒಟ್ಟಿಗೆ ಹೇಳುತ್ತಿದ್ದೊ. ಚಾಂಪ ಚಾಮೇವ. ನಂಗೆ ಆಗ ಹನ್ನೆರಡು ವರ್ಷ ಪ್ರಾಯ ಚಾಮೆವಂಗೆ ಹದಿನೈದು ರೂಪಾಯಿ ಕೊಟ್ಟ್ ಹೆಣ್ಣ್ ತಂದದ್ದ್‌ತ ಚಾಂಪ ನನ್ನ ಜತೆಲಿ ಹೇಳುತ್ತಿದ್ದೊ. ಆಗನ ಬದುಕುವ ಕಷ್ಟ ನಂಗೆ ನೆನಪು ಆತ್. ಆಗ ಚಾಂಪ ನಂಗೆ ಬುದ್ದಿ ಹೇಳಿ ಕೊಡುತ್ತಿದ್ದೊ. ಬಾಳೆ ನೋಡು ಬೆಂಕಿಯಲಿ ಬೆಂದರೆ ಸುಳಿಬಾದು. ಮನುಷ್ಯರ ಬಾಯಲ್ಲಿ ಶಾಪತಿಂದರೆ

ಒಳ್ಳೆದು ಆದುಲ್ಲೆಂತ ಹೇಳುತ್ತಿದ್ದೊ. ನಾನು ಮಾತ್ರ ನಮ್ಮ ಚಾಂಪ ಚಾಮೆವ ಹೇಳಿಕೊಟ್ಟ ಬುದ್ಧಿಮಾತ್‌ನ ಹಂಗೆನೆ ನಡಕಂಡ್ ಬರುತ್ತೊಳೆ. ಹಿಂದಿನ ಕಾಲಲ್ಲಿ ಗೂಡೆಗೆ ಹದಿನಾಲ್ಕು ಹದಿನೈದು ವರ್ಷ ಆಕನ ಮದುವೆ ಮಾಡುವ ಕೆಲಸ. ಗೂಡೆಗೆ ಮದುವೆ ಮಾಡ್‌ಕನ ಸಣ್ಣದೊಂದು ಚಿನ್ನದ ಚೈನ್ ಒಂದು ಜೊತೆ ಓಲೆ, ಕಾಲ್‌ಚೈನ್ ಒಂದು ಜೊತೆ, ಮೂಗುತಿ, ಕೊಟ್ಟರೆ ಆತ್‌ಗಡ. ಬಟ್ಟೆ ಐದು ಸೀರೆ ಏಳು ಸೀರೆ, ಒಂದು ಟಿನ್ನ್ ಪೆಟ್ಟಿಗೆ, ಐದು ಕಂಚಿನ ಸಾಮಾನ್. ಟಿನ್ನ್ ಪೆಟ್ಟಿಗೆ ಕೊಟ್ಟವು ಆಗನ ಕಾಲದವು ತುಂಬಾ ಶ್ರೀಮಂತರ್‌ಗಡ. ಆಗನ ಕಾಲಲಿ ಮದುವೆ ಗೂಡೆಗೆ ಹೆಚ್ಚಾಗಿ ಮರದ ಪೆಟ್ಟಿಗೆ ಕೊಡ್ದುಗಡ. ಈಗಿನ ಕಾಲದ ಮಕ್ಕ ಪುಣ್ಯಪಡೆದವು. ಒಳ್ಳೆ ಒಳ್ಳೆಯ ಬಟ್ಟೆ, ಒಳ್ಳೆ ಒಳ್ಳೆಯ ಚಿನ್ನ, ಈಗಿನ ಮಕ್ಕಳಿಗೆ ಚೂಡಿದಾರಗಡ, ಗಗ್ಗಾರ್‌ಗಡ, ತರತರದ್ ಡ್ರಸ್ ಹಾಕುವೆ.

ಹಿಂದಿನ ಕಾಲದವಕೆ ಡ್ರಸ್ ಅಂತ ಹೇಳ್ದರೆ ಗೊತ್ತ್‌ಲೆ. ಹಿಂದಿನ ಕಾಲಲ್ಲಿ ಮದೆವೆ ನೂರ್ ರೂಪಾಯಲ್ಲಿ ಆತಿತ್ತ್‌ಗಡ. ಆಗನ ಕಾಲಲಿ ದುಡ್ಡುಗೆ ಅಷ್ಟೆ ಕಷ್ಟ ಇತ್ತ್‌ಗಡ. ಮೂವತ್ತು ವರ್ಷದ ಹಿಂದೆ ಮಕ್ಕಳ ಮದುವೆಗೆ ಒಂದು ಲಕ್ಷ ರೂಪಾಯಿ ಇದ್ದರೆ ಚಿನ್ನ, ಬಟ್ಟೆ, ಮದುವೆ ಖರ್ಚು ಎಲ್ಲಾ ಆಗ್‌ತಿತ್ತ್. ಆದರೆ ನಮ್ಮ ಮಕ್ಕಳ ಮದುವೆ ಖರ್ಚು ಹೇಳಿ ಬರ್ದಳೆ. ಈಗಿನ ಕಾಲದ ಮಕ್ಕಳ ಮದುವೆಗೆ ಹತ್ತು ಲಕ್ಷ ರೂಪಾಯಿ ಯಾವ ಮೂಲೆಗೆ ಇಲ್ಲೆ. ಈಗಿನ ಕಾಲದ ಮಕ್ಕಳಿಗೆ ಯಾವ ಕಷ್ಟಗಳನ್ನೆ ಗೊತ್ತ್‌ಲೆ. ನೂರಕೆ ಇಪ್ಪತ್ತು ಹೆಣ್ಣು ಮಕ್ಕಳಿಗು, ಗಂಡು ಮಕ್ಕಳಿಗು ಮನೆಯ ಕಷ್ಟ ಸುಖ ಗೊತ್ತಿರುದು. ಈಗಿನ ಕಾಲದ ಮಕ್ಕಳಿಗೆ ಸುಖ ಜೀವಮಾನ. ಹಿಂದಿನ ಕಾಲದವಕೆ ಗೂಡೆಗೆ ದೊಡ್ಡವು ಆದಂಗೆ ಸೀರೆ ಉಡಕು. ದೊಡ್ಡವು ಆಕೆಮುಂದೆ ಲಂಗಬ್ಲೌಸ್ ಜಂಪರ್ ಹಾಕಕು.

ಹಿಂದಿನ ಕಾಲದವು ಅತ್ತೆ ಮಾಂವನ ಸೇವೆ ಮಾಡಕು. ಯಾಗೊಳು ಮಾಂವನ ನೆತ್ತಿಗೆ ಎಣ್ಣೆ ಹಾಕಿ ಅಂಗಾಲಿಗೆ ಎಣ್ಣೆ ತಿಕ್ಕಿ ಕೊಡಕು. ಹೇಳ್ದಂಗೆ ಕೆಲಸ ಮಾಡದಿದ್ದರೆ ಮನೆಗುಡಿಸುವ ಚೀಪೇಲಿ ಅತ್ತೆ ಯಾಗೊಳು ಹೊಡೆದುಗಡ. ಒಂದು ದಿನ ಅತ್ತೆಮನೆಗೆ ನೆಂಟರು ಬಂದಳೊ. ಎಲ್ಲವು ಮಲಗುವ ಸಮಯ. ಆ ದಿನ ನೆಂಟರು ಒಳತ್ತೇಳಿ ಸೊಸೆಗೆ ಚೀಪೆಲಿ ಹೊಡ್ತ್‌ತಲೆಗಡ. ಅತ್ತೆ ಅತ್ತೆ ನಂಗೆ ಯಾಗೋಳು ಕೊಡುವ ಮರ್ಯಾದೆ ಕೊಡಿ ಅಂತ ಸೊಸೆ ಕೇಳ್ತ್‌ಗಡ. ಬಂದ ನೆಂಟರಿಗೆ ಆಶ್ಚರ್ಯ ಆತ್‌ಗಡ. ಸೊಸೆ ಅತ್ತೆವಟ್ಟೆಗೆ ಎಂತ ಮಾರ್ಯದೆ ಕೇಳ್ದುತ. ಅತ್ತೆಗೆ ನಾಚಿಕೆ ಆಗಿ, ಅದರ ಮೇಲೆ ಸೊಸೆಗೆ ಚಿಪೇಲಿ ಹೊಡೆದು ಬುಟ್ಟತ್ತ್‌ಗಡ. ಹಿಂದಿನ ಕಾಲದವರ ಹಣೆಯ ಬರಹ. ಈಗಿನ ಕಾಲದವರ ಪುಣ್ಯ.

✍ಕಾಳೆಯಡ ತಂಗಮ್ಮ ಅಪ್ಪಚ್ಚ

ಬಿಳಿಗೇರಿ ಗ್ರಾಮ,

ಮಡಿಕೇರಿ ತಾಲೂಕು, ಕೊಡಗು.

# ನಮ್ಮ ಸಂಸ್ಕೃತಿ ಬದಲಾದಾಂಗೆ ನಾವು ಬದಲಾದವೇ...

ನಾವಿಂದು ಆಧುನಿಕ ಯುಗಲೀ ಸಾಗ್ತಾ ಒಳ. ನಮ್ಮ ಅಂದ್‌ನ ಕಾಲಕ್ಕೂ ಇಂದುನ ಕಾಲಕ್ಕೂ ಹೋಲ್ಸಿರೆ ಸುಮಾರು ಬದಲಾವಣೆ ಕಂಡುಬಂದದೆ. ಇಂದು ಅಂದುನಾಂಗೇ ಹಳ್ಳಿ ಜೀವನ ಇಲ್ಲೆ. ಎಲ್ಲಾ ಪೇಟೆ ಜೀವನ ಇಷ್ಟ ಪಡೊವೇ. ಎಲ್ಲವುಕೆ ಕುದ್ದಲ್ಲೇ ಆಕು... ಇಂದ್ ನಾವು ಬೆಳಿತಾ ಒಳ. ನಮ್ಮ ದೇಶ ಅಭಿವೃದ್ಧಿ ಆಕ್ತಾ ಉಟ್ಟು. ನಮ್ಮ ದೇಸ ಶ್ರೀಮಂತ ದೇಸಗಳ ಮೀರ್ಸಿ ಬೆಳಿಯೊಕು. ಅಂಥ ಶಕ್ತಿ ಮೀರಿ ಪ್ರಯತ್ನ ಪಡ್ತಾ ಒಳ....

ಈ ಆಧುನಿಕ ಪ್ರಪಂಚಲ್ಲಿ ನಾವು ನಮ್ಮ ಸಂಸ್ಕೃತಿ ಆಚಾರ ವಿಚಾರನ ಮರಿತಾ ಒಳ. ಕೆಲವು ಹಿರಿಜೀವಗ ತಮ್ಮ ಆಚಾರ ವಿಚಾರ ನಡ್ಸಿಕೊಂಡು ಹೋದರು ಮತ್ತೆ ಬಂದ ಪೀಳಿಗೆ ಪೂರ ಪ್ಯಾಷನ್‌ಯುಗ ಅಂತ ಹೇಳುವ ಈ ಕಾಲಕ್ಕೆ ಒಗ್ಗಿಕೊಂಡು ಹೋದವೆ.

ಈಗ ಅಂದುನಾಂಗೆ ಇಲ್ಲೆ. ಅಂದು ಬೇಸಾಯ ಮಾಡಿಕೊಂಡು ಗದ್ದೆ ಪುಣಿಲೇ ಇರ್‍ತಿದ್ದ. ಇಂದು ರೋಡುಸೈಡ್ ಮೊಬೈಲ್ ಒತ್ತುತ್ತಾ ನಿಲ್ಲುವ ಹುಡುಗರ ನೋಡ್ಕನನೇ ಗೊತ್ತಾದೆ. ಕಾಲ ಬದಲಾತ್ ಅಂತ. ಗದ್ದೆಗೆ ದೈ ಕಮ್ಮು ಹಾಕಿ ಅರಾಮಾಗಿ ತಮ್ಮ ಪಾಡಿಗೆ ನಾವಿದ್ದವೆ. ಬೇಸಾಯವೇ ಬದುಕಾಗಿದ್ದ ಗೌಡ ಜನಾಂಗ ಇಂದು ಪೇಟೆಗೆ ಕೆಲ್ಸಕ್ಕೆ ಹೋಗ್ತಾ ಒಳ.

ತಾತ ಅವ್ವಂದಿರು ಸಾಂಪ್ರದಾಯಿಕ ಕಂಬಾಯಿ, ಅಂಗಿ, ಹೆಂಗ್ಸುಗ ಸೀರೆ ಉಡ್ತಿದ್ದ. ಲಂಗರವಿಕೆ ಹಾಕ್ತಿದ್ದ. ಈಗದ ಮಕ್ಕ ಚೂಡಿ, ಪ್ರಾಕ್, ಜೀನ್ಸ, ಹಾಕುದು. ಹೈದಂಗ ಸೊಂಟದ ಕೆಳಗೆ ಪ್ಯಾಂಟ್ ಹಾಕುದು, ಚಡ್ಡಿ ಹಾಕುದು, ನಾವೀಗ ಕಾಣ್ತಾ ಒಳ. ಏಕೆಂದರೆ ಈಗದ ಸಂಸ್ಕೃತಿನೇ ಅಂಥದ್ದು. ಬದಲಾವಣೆ ಬೇಕಲ್ಲ. ಅದು ಬುಡಿ ಈಗ ಹೊಟ್ಟೆಗೆ ತಿಂಬೊದು ಕೂಡ ಬೇರೇನೇ ಆವುಟ್ಟು. ಅಂದು ಗದ್ದೆಲೀ ಬೇಸಾಯ ಮುಗ್ದ ಮೇಲೆ ಮಾಡ್ತಿದ್ದ ನಟ್ಟಿಕಾಯಿ, ಮರಗೆನ್ಸ್, ಎಲ್ಲಾ ದನಗಳ ಗೊಬ್ಬರ ಹಾಕಿ ಲಾಯಿಕ್ ಸೊಕ್ಕಿದ ಮೇಲೆ ಕೊಯ್ದು ತಿಂದು ಗಟ್ಟಿಮುಟ್ಟಾಗಿ ನೂರು ವರ್ಷ ಬೊದ್ಕಿದ್ದ ನಮ್ಮ ಹಿರಿಯರುಗೂ ಇಂದು ಪೇಟೇಲಿ ಸಿಕ್ಕುವ ಎಲ್ಲಾ ವಸ್ತುಗಳ ತಂದು ತಯಾರು ಮಾಡುವ ಊಟಕ್ಕೂ ರೆಡಿಮೆಡ್ ವಸ್ತುಗಳ ಬಳಕೆ ಮಾಡಿ ಲಾಯಿಕ್ ರುಚಿ ಬರುವಂಗೆ ಮಾಡಿ ಇಷ್ಟಪಟ್ಟು ತಿಂದು ಬೊಜ್ಜು ಬೆಳ್ಸಿಕೊಂಡು ಮತ್ತೆ ಅರವತ್ತು ವರ್ಷ ಆಕಾನನೇ ಕುದ್ದಲ್ಲಿ ಆದವೆ...

ಮತ್ತೆ ಹೆಣ್ಣುಮಕ್ಕ ಲಕ್ಷಣವಾಗಿ ಲಂಗ ರವಿಕೆ ಹಾಕ್ತಿದ್ದವು ಈಗ ಜೀನ್ಸ್, ಪ್ರಾಕ್ ಅದು ಇದು ಎಲ್ಲಾ ಸುರು ಮಾಡ್ದ. ಹೈದಂಗ ಏನೂ ಕಮ್ಮಿ ಇಲ್ಲೇ

ನಾವೀಗ ಬೇರೆ ದೇಶದ ಸಂಸ್ಕೃತಿನೆ ಇಷ್ಟ ಪಡ್ತಾ ಒಳ. ಇದರಿಂದಾಗಿ ಹೆಣ್ಣುಮಕ್ಕಳ ದೌರ್ಜನ್ಯ ಜಾಸ್ತಿ ಆಕ್ತಾ ಇರುದು. ಎಲ್ಲಿ ನೋಡ್ರು ಹೆಣ್ಣು ಮಕ್ಕ ಶಿಕ್ಷೆಗೆ ಒಳಗಾದವೆ. ಇದಕ್ಕೆ ಹೆಣ್ಣು ಮಕ್ಕಳ ಆಚಾರ ವಿಚಾರನೂ ಕಾರಣ ಆದೆ.

ಈಗದ ಹೈದಂಗಳಿಗೆ ಗೂಡೆಗಳಿಗೆ ಎಲ್ಲೇ ಹೋಗಲಿ ಲಾಯಿಕ್ ಅಡ್ಗೆ ಮಾಡಿಕೆ, ಹುಲ್ಲು ಹೆರಿಯಕೆ, ಹಾಲು ಕರೆಯಕೆ ಬಾದ್ಲೆ, ಎಲ್ಲಾ ಮೊಬೈಲ್ ಕಂಪ್ಯೂಟರ್ ಮುಂದೆ ತಮ್ಮ ಬಲ ಪ್ರಯೋಗಿಸಿ ಬುಟ್ಟವೆ. ಖಾಲಿ ಮೆದುಳು ಮಾತ್ರ ಈಗ ಲೈಕ್ ಮಾಡ್ದು. ಏಕೆಂದರೆ ಜಗತ್ತೆ ಹಾಂಗೆ ಎಲ್ಲಾ ತಂತ್ರಜ್ಞಾನ ಯುಗ.

ನಾವು ಅದರಂದಲೂ ಬೇಗ ಹೋಕಷ್ಟೆ. ಈಗ ಗದ್ದೆ ನೋಡಿಕೆ ಎಲ್ಲಿ ಉಟ್ಟು. ಎಲ್ಲಾ ತೋಟ ಆವುಟು. ರಬ್ಬರ್ ಆವುಟು. ಗದ್ದೆಲೀ ನಾಟಿ ಮಾಡ್ಕನ ಪಾಡ್ದನ ಹೇಳ್ದು ಕಥೆ ಹೇಳ್ದು ಎಲ್ಲಾರ್ ಕೇಳ್ಟೆನಾ?.. ಗದ್ದೆ ಹೂಡ್ಕನ ಅಪ್ಪ ಅಮ್ಮ ಮಕ್ಕಳ ತಾತ ಅವ್ವನ ಹಕ್ಕಲೆ ಬುಟ್ಟು ಗದ್ದೆ ಕೆಲ್ಸ ಮಾಡ್ತಿದ್ದ. ತಾತ ಗದ್ದೆ ಹೂಡ್ಕನ ಮಕ್ಕ ಪೂರ ಗದ್ದೆ ಪುಣಿಲೀ ಸಾಲು ನಿಂತು ನೋಡ್ದು ಎಂಥ ಕುಶಿ. ಜೋಲುಲೀ ಬಿದ್ದುಕಂಡು ಎದ್ದುಕಂಡು ಓಡ್ತಿದ್ದ ಮಣ್ಣಿನ ಮಕ್ಕಳಿಗೂ ಇಪ್ಪತ್ನಾಲ್ಕು ಗಂಟೆ ಮನೆ ಒಳ್ಗೆ ಪುಸ್ತಕ, ಮೊಬೈಲ್, ಟಿ.ವಿ. ಮುಂದೆ ಕುದ್ರುವ ಮಕ್ಕಳಿಗೂ ಎಷ್ಟು ವ್ಯತ್ಯಾಸ.

ಅಂದು ಅಜ್ಜ ಅಜ್ಜಿಗ ಕಾಡಿಗೆ ಹೋಗಿ ಬೆತ್ತ ಬೊಳ್ಳಿ ತಂದು ಹೆಡಗೆ, ಭರ್ಜಿ ಚಿಪ್ಪಿ ಸೆಡೆ, ಕುಕ್ಕೆ, ಪೂರ ಮಾಡ್ತಿದ್ದ. ಅಂಥ ಕರಕುಶಲತೆ ಗೊತ್ತಿತ್ತ್.

ಈಗ ಎಲ್ಲವೂ ಒಟ್ಟಿಗೆ ಕುದ್ದು ಮಾತಾಡುವಷ್ಟು ಪುರುಸೊತ್ತು ಇಲ್ಲೆ. ಎಲ್ಲವೂಕೆ ಕೆಲಸ, ಕೆಲಸ, ಕೆಲಸ. ಮನೆಕೆಲ್ಸ, ತೋಟದ ಕೆಲ್ಸ ಆದರೂ ಆದು. ಈಗದ ಜನ. ಕೆಲಸಕ್ಕೆ ಪೇಟೆಗೆ ಹೋದು. ಅದು ಎಷ್ಟೆ ಕೀಳು ಕೆಲ್ಸ ಆದರೂ, ಇನ್ನೊಬ್ಬನ ಕೈಂದ ಸಂಬಳ ಪಡಿವಂತ ಒಳ್ಳೆ ಕೆಲ್ಸ ಆದರೂ, ಪೇಟೆಗೆ ಹೋದು ಅದು ಪ್ರತಿಷ್ಠೆ.

ಹಪ್ಪಳ, ಸಾಂತನೀ, ಮಾಂಬಳಕ್ಕೆ, ಮುಳ್ಳ, ಮೂಡೆಗೆ, ಸಮಯನೇ ಇಲ್ಲೆ. ಮಕ್ಕಳಿಗೆ ತಿಂಡಿ ಮಾಡಿಕೊಟ್ಟು ಶಾಲೆಗೆ ಕರುಕೊಂಡು ಹೋಕೆನೂ ಪುರುಷೊತ್ತು ಇಲ್ಲೆ. 8 ಗಂಟೆ ಆಕನ ಹೋಕು, ಎಂಟು ಗಂಟೆ ಆಕನ ಬರೋಕು. ಮತ್ತೆ ಗಡಿಬಿಡಿಲೀ ಕೆಲ್ಸ ಮುಗ್ಸುದು ಊಟ ಮಾಡಿ ಸುಸ್ತು ಅಂತ ಮಲ್ಗಿರೇ ದಿನ ಮುಗ್ತು.

ಮತ್ತೆ ಮಕ್ಕಳ ವಿಚಾರಿಸಿಕೆ, ಮಾತಾಡಿಕೆ ಎಲ್ಲಿ ಹೊತ್ತು ಉಟ್ಟು. ಅವ್ವ ತಾತಾ ಇದ್ದ ಮನೆ ಆದರೆ ಮಕ್ಕಳೊಟ್ಟಿಗೆ ಅವಾರೂ ಇದ್ದವೇ.... ಇಂಥ ಪರಿಸ್ಥಿತಿ

ಆದ್ದರಿಂದಲೇ ಮಕ್ಕ ದಾರಿ ತಪ್ಪುವೆ ಹೇಳುವವು ಕೇಳುವವು ಯಾರು ಇಲ್ಲೆ. ಕಿಸೆಗೆ ಬಂದಷ್ಟು ದುಡ್ಡು ಕೊಟ್ಟವೇ ಮತ್ತೇನು.....

ನಾವು ನಮ್ಮ ಪಾಡಿಗೆ ಇದ್ದವೇ....

ಇನ್ನು ಕುಟುಂಬದವು. ಎಲ್ಲಾ ಒಟ್ಟಿಗೆ ಸೇರೋಕು ಅಂದರೇ ಊರನ ಜಾತ್ರೆನೂ, ಕುಟುಮಲಿ ಕಲಿಯಾಟ, ದೈವ ನಡಾವಳಿ ಆಕನಾ ಒಮ್ಮೆ ಎಲ್ಲಾ ಹೊರಗೆ ಬಂದವೆ. ಎಲ್ಲೆಲ್ಲಾ ಇದ್ದವು ಕೂಡ ದೇವರ ಮೇಲಿನ ಭಕ್ತಿಗಾದರೂ ಬಂದು ಕೈ ಮುಗ್ದವೇ. ಆಗ ಕ್ಷೇಮ ಸಮಾಚಾರ ಮಾತಾಡಿರೆ ಮತ್ತೆ ಕುಟುಮಲೀ ಮೊದ್ವೆನೂ ಬೊಜ್ಜನೂ ಆಕು. ಆಗ ಒಮ್ಮೆ ಒಬ್ಬೊಬ್ಬ ಮಾತಾಡಿಕೆ ಸಿಕ್ಕುವೆ. ಅದು ಬುಟ್ಟರೇ ನಮ್ಮ ಮನೆ ಕೆಲಸ. ವಾರದ ರಜೆಲಿ ಒಮ್ಮೆ ಆಚೆ ಮನೆಗೆ ಹೋಗಿ ಬಂದರೇ ಹೆಚ್ಚ್.

ರಜೆ ಇರ್‌ಕನ ಇಜಲ್‌ಲೀ ಬಂದ ಕಾಡುಹುಲ್ಲು ಕೀಳ್ದೊ, ಕಣಿ ಕೆರುಕುದಾ, ಗಂಡಸರು ಮಾಡ್ರೆ ಹೆಂಗಸರು ವಾರದ ಬಲೆ ಪೂರ ತೆಗ್ದ್ ಮನೆಲಾಯಿಕ್ ಮಾಡ್ವೆ, ಆಗಲೇ ರಜೆಯ ಹಿಂಬೊತ್ತು ಆತಲ್ಲ. ಮಾರನೇ ದಿನಂದ ಅದೇ ಪುನರಾವರ್ತನೆ.

ಇನ್ನು ಪೇಟೆಲಿ ಇದ್ದವು ಕೇಳೋಕ? ನಮ್ಮ ರೂಮುಂದ ಆಚೆ ರೂಮ್‌ಲೀ ಯಾರೆಲ್ಲ ಒಳ ಎಷ್ಟು ಜನ ಒಳನೂ ಗೊತ್ಲೆ. ಹಿಂಬೊತ್ತು ಹೊರಗಿಂದ ಬಂದು ಮನೆಗೆ ಹೊಕ್ಕರೆ ಮತ್ತೆ ಬೊಳ್ಪಿಗೆ ಹೊರಗೆ ಬಾದು. ಆಟೊನೋ ಗಾಡಿನೋ ಹತ್ತಿ ಹೋದರೆ ಒಂದು ಹರಟೆ ಹೊಡೆಯೂದು ಇಲ್ಲೆ ಕಷ್ಟ ಸುಖನೂ ಇಲ್ಲೆ.

ದೊಡ್ಡ ದೊಡ್ಡ ಪೇಟೇಲಿ ಮಕ್ಕಳ ಹೊರಗೆ ಬುಡುವ ಹಂಗೆನೂ ಇಲ್ಲೆ. ಮಕ್ಕಳೂ ನಾಕು ಗೋಡೆ ಮಧ್ಯೆ ಪುಸ್ತಕ ಓದಿನೋ ಟಿ.ವಿ. ಮೊಬೈಲು ಮಧ್ಯೆನೋ ಜೀವನ ಸಾಗ್ಸುವೆ.

ಈ ಮೊಬೈಲ್ ಕಂಪ್ಯೂಟರ್ ಬಂದ ಮೇಲೆ ಪುಸ್ತಕ ಓದುದು ಏನಾರು ಬರೆಯೂದರ ಜನ ಕಮ್ಮಿ ಮಾಡ್ಯೊಳ. ಇದು ವಿಷಾದ.

ಪರೀಕ್ಷೆ ಪಾಸಾಕೆ ಮಾತ್ರ ಓದುವೇ ಹೊರತು ಜ್ಞಾನಕ್ಕಾಗಿ ಓದುದು ಕಮ್ಮಿ ಆವುಟು. ಅದೇ ಕೈ ಕಾಲು ಕೆಲ್ಸ ಮಾಡ್ದುಲೆ. ಕೇವಲ ತಲೆ ಕೆಲ್ಸ ಮಾಡ್ದು ಈ ಯುಗಲಿ.

ಇನ್ನು ನಮ್ಮ ಸಂಪ್ರದಾಯ ಬದ್ಧ ಮದುವೆ, ಬೊಜ್ಜ, ಕೂಸುನ ತೊಟ್ಲು ಇದೆಲ್ಲ ಎಷ್ಟು ಬದಲಾವಣೆ ಆವುಟು ಅಂತ ಹೇಳ್ರೆ, "ಹತ್ತು ಕುಟುಂಬ ಹದಿನೆಂಟು ಗೋತ್ರ ಬಂಧು ಬಾಂಧವರೇ" ಅಂತ ಹೇಳುವ ಊರ ಗೌಡನ ಹೇಳಿಕೆ. ಈಗದ ಹೈದಂಗಳಿಗೆ ಬಂದದೇನಾ? ಅದೇ ಸಿನಿಮಾ ಡೈಲಾಗ್ ಎಷ್ಟು ಲಾಯಿಕ್

ಹೇಳ್ವೆ. ಸಿನಿಮಾ ಪದ್ಯ ಹೇಳುವಾ ಈಗದವು ಹೆಣ್ಣು ಇಳ್ಸಿದು, ಆರತಿ ಎತ್ತುವ ಪದ್ಯ ಬಂದದೇನಾ ಇಲ್ಲೇ. ಅದರಲ್ಲಿ ಜೋಶ್ ಇಲ್ಲೆ, ಥ್ರಿಲ್ ಇಲ್ಲೆ. ಹಾಂಗೆ ಅದರ ಮುಂದುವರೆಸುವ ಗೊಜಿಗೆ ಹೋದ್ಲೆ. ಈಗ ಏನಿದ್ದರೂ ಡಿ.ಜೆ. ಬ್ರೇಕ್‌ಡ್ಯಾನ್ಸ್ ಸಿನಿಮಾ ಪದ್ಯ ಇದ್ಕೇ ಸೊಂಟ ಕುಣ್ಸುವೆ. ಶಾಸ್ತ್ರ ವಿಧಿಗ ತೀರ ಕಮ್ಮಿ ಆವುಟು. ಮಾಡೊಕಲ್ಲ ಅಂತ ಮಾಡ್ವೆ ಹೊರತು ಅದರ ಮಹತ್ವ ತಿಳ್ದು ಪೊರ್‌ಲುಲೀ ಮುಂದೆನೂ ಒಳಿಯಾಕು ಅಂತ ಯಾರು ಮಾಡ್ದುಲೇ. ಈಗ ಮದುಮಂಜ. ಮೆದುಳಿಗೆನ ಅಲಂಕಾರನೂ ಬದಲಾವುಟು. ಜುಬ್ಬಾ, ಕುರ್ತಾ, ಗೂಡೆಗಳಿಗೆ, ತಿಹಂಗಾ, ಜೋಲಿ ಅಂತ ಮದೊಳಿಗೆನೂ ಜರೀಸೀರೆ ಬುಟ್ಟುಟ್ಟು.

ಲಕ್ಷಣವಾಗಿ ತಲೆ ಕೂದಲು ನೈದು, ಜಡೆ ಹಾಕಿ, ಹೂವು ಮುಡಿವಾ ಬದ್ಲು, ಸಿನಿಮಾ ಗೂಡೆಗಳಾಂಗೆ ಕೂದಲು ಬುಟ್ಟು ಮದ್ವೆ ಆದವೆ. ಇನ್ನೆಲ್ಲಿ ಹೂವು ಮುಡಿದು? ಅದೇ ಎಲ್ಲವೂಕ್ಕೂ ಇಷ್ಟ ಆವುಟು. ಅದೇ ಹೇಳ್ದಲ್ಲ.... ವಿದೇಶಿ ಪ್ಯಾಷನ್ ಅಂತ ಇನ್ನು ಕೂಡ ನಮ್ಮ ಸಂಸ್ಕೃತಿಲೀ ಬದಲಾವಣೆ ಆದೆ.

ಜನಪದ ನೃತ್ಯಗಳ ಬುಟ್ಟು ಬ್ರೇಕ್ ಡ್ಯಾನ್ಸ್ ನಾವುಗೆ ಇಷ್ಟ ಆಕ್ತಾ ಉಟ್ಟು. ಇದರ ನಾವು ವಿರೋಧಿಸುವಂಗೆ ಇಲ್ಲೆ ಏಕೆಂದರೆ.. ಹಳೆ ಸಂಸ್ಕೃತಿ ಹೋಗಿ ಹೊಸ ಸಂಸ್ಕೃತಿ ಬಾತು. ಅದೇ ಹಳೇ ಜನ ಹೋಗಿ ಹೊಸ ಜನಗ ಹೊಸ ಪೀಳಿಗೆ ಬರ್‍ತಾ ಉಟ್ಟು. ಹೊಸತನ ಬಯಸುವ ಹೊಸ ಪೀಳಿಗೆಗೆ ನಾವು ಸ್ವಾಗತ ಮಾಡೋಕು.

ಆದರೂ ತಮ್ಮ ಸಂಸ್ಕೃತಿ ಆಚಾರ ವಿಚಾರನ ಸಂಪೂರ್ಣ ದೂರ ಮಾಡಿಕಾಗದು. ಏಕೆಂತೇಳ್ರೆ ನಾವು ಭಾರತ ದೇಶದ ಮಕ್ಕ. ನಾವು ಬೇರೆ ದೇಶದ ಸಂಸ್ಕೃತಿ ಅನುಸರಿಸಿಕ್ಕೆ ಆಗದು. ಹಂಗೆ ಮಾಡ್ರೆ ನಮ್ಮ ದೇಶದ ಸಂಸ್ಕೃತಿನ ಮೂಲೆ ಗುಂಪು ಮಾಡ್ದಂಗೆ ಆದೆ. ಆದಷ್ಟು ನಮ್ಮ ಸಂಸ್ಕೃತಿನ ಆಚಾರ ವಿಚಾರನ ಉಳ್ಸಮ. ಹಬ್ಬಗಳ ಮದುವೆ, ಇತ್ಯಾದಿ ಶುಭಕಾರ್ಯಗಳ ಸಂಪ್ರದಾಯಬದ್ಧವಾಗಿ ಆಚರಣೆ ಮಾಡಮ. ನಮ್ಮ ಭಾಷೆಗಳ ಉಳ್ಸಮ ಬರವಣಿಗೆ ಬೆಳ್ಸಮ ನಮ್ಮ ದೇಶ, ನಮ್ಮ ಜನ, ನಮ್ಮ ಸಂಸ್ಕೃತಿ ಇದರ ಬಗ್ಗೆ ಹೆಮ್ಮೆ ಪಡಮ.

✍ಶರಣ್ಯ ಕೋಲ್ಚಾರ್.

D/o ಕುಶಾಲಪ್ಪ ಗೌಡ ಕೋಲ್ಚಾರ್,
ಕೋಲ್ಚಾರ್ ಅಂಚೆ, ಸುಳ್ಯ ತಾಲೂಕು,
ಆಲೆಟ್ಟಿಗ್ರಾಮ, ದ.ಕ.ಜಿಲ್ಲೆ.
ಮೊ : 9449061790.

ಗಾದೆ ಗಮ್ಮತ್ತ್

## 'ಅ' ಕಾರದ ಚಮತ್ಕಾರ (ಹಿಂದೆನ ಸಂಚಿಕೆಂದ)

24. ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾದುಲೆ.
25. ಅಡಿಗೆ ಬಿದ್ದರೂ ಮೂಕು ಮ್ಯಾಲೆಂತ ಹೇಳ್ದಂಗೆ
26. ಅತಿಯಾದರೆ ಅಮೃತನೂ ವಿಷ.
27. ಅತಿಯಾಸೆ ಗತಿಕೇಡು.
28. ಅತೆಗೊಂದು ಕಾಲ ಸೊಸೆಗೊಂದು ಕಾಲ.
29. ಅತ್ತೆ ಒಡ್ದ ಪಾತ್ರೆಗೆ ಬೆಲೆ ಇಲ್ಲೆ.
30. ಅತ್ತೆ ಮ್ಯಾಲಿನ ಸಿಟ್ಟ್ ಕೊತ್ತಿಮ್ಯಾಲೆ.
31. ಅದರಕ್ಕೆ ಕಹಿ ಉದರಕ್ಕೆ ಸಿಹಿ.
32. ಅನ್ನ ಹಾಕಿದ ಮನೆಗೆ ಕನ್ನ ಹಾಕಿದ.
33. ಅನ್ನದಂಗೆ ಆರೋಗ್ಯ ನೂಲಿನಂಗೆ ಸೀರೆ.
34. ಅನ್ನ ಹಳಸಿತ್ತ್ ನಾಯಿ ಹಸಿದಿತ್ತ್.
35. ಅನ್ನ ಹಾಕಿದ ಮನೆ, ಗೊಬ್ಬರ ಹಾಕಿದ ಹೊಲ ಹಾಳಾದುಲ್ಲೆ.
36. ಅಪ್ಪನ ಅಪ್ಪಾಂತೇಳದಂವ ಚಿಕ್ಕಪ್ಪನ ಹೇಳಿದೆನಾ?
37. ಅಪ್ಪಾ ಅಮ್ಮನ ಜಗಳಲಿ ಕೂಸು ಲಾಚಾರಾತ್.
38. ಅಭ್ಯಾಸದಂಗೆ ಆಟ, ಬೇಸಾಯದಂಗೆ ತೋಟ.
39. ಅಯ್ಯೆ ಹೊಟ್ಟೆ ನೋಡ್ತ್ ಹೆಣ್ಣ್ ಜೋಬು ನೋಡ್ತ್.
40. ಅರಿಯನೆಂದರೆ ಅರುವತ್ತು ಗುಣ.
41. ಅರಿಯಕೆ ಎಲ್ಲವು ಇದ್ರೂ ಕುಡಿಯಕೆ ಒಬ್ಬನೇ.
42. ಅರುವತ್ತಕ್ಕೆ ಅರುಳೋ ಮರುಳೋ.
43. ಅಲ್ಪಂಗೆ ಐಶ್ವರ್ಯ ಬಂದರೆ ಅರ್ಧ ರಾತ್ರಿಲಿ ಕೊಡೆ ಹಿಡ್ಸಿಕಂಡದೆ.
44. ಅಲ್ಪರ ಸಂಗ ಅಭಿಮಾನ ಬಂಗ.
45. ಅವರವರ ಕೈ ಅವರವರ ತಲೆಗೆ
46. ಅವಸರವೇ ಅಪಘಾತಕ್ಕೆ ಕಾರಣ
47. ಅವ್ವಂಗೆ ಅರಿವೆ ಚಿಂತೆ ಮಗಳಿಗೆ ಮಿಂಡನ ಚಿಂತೆ.
48. ಆಶ್ಲೇಷ ಮಳೆ ಕೈತುಂಬಾ ಬೆಳೆ.
49. ಅಹಂಕಾರಕ್ಕೆ ಉದಾಸೀನವೇ ಮದ್ದ್.
50. ಅಳಿಯ ಮನೆ ತೊಳಿಯ.
51. ಅಳಿಯ ಅಲ್ಲ ಮಗಳ ಗಂಡತ ಹೇಳ್ದಂಗೆ.
52. ಅಳಿಲು ಸೇವೆ ಮಳಲು ಭಕ್ತಿ.
53. ಅಳ್ಳೆಗೆಂತ ಹೊಡ್ದಗುಂಡು ಉಳ್ಳಿಗಾತ್.

(ಮುಕ್ತ್)

✍ಕುಲ್ಲಚನ ಕಾರ್ಯಪ್ಪ

ಕುಂಬಳದಾಳು,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

## 2. ಗಾದೆಗ (ಹಿಂದೆನ ಸಂಚಿಕೆಂದ)

83. ಅತ್ತೆಗೆ ತಕ್ಕ ಸೊಸೆ.
84. ಗಂಡನ ತಾಳಕ್ಕೆ ಹೆಂಣ್‌ನ ಮೇಳ.
85. ತಾಯಂತ ಮಕ್ಕ, ನಾಯಂತ ಬಾಲ.
86. ರೋಗಿ ಬಯಸಿದ್ದ್ ಹಾಲನ್ನ ವೈದ್ಯ ಹೇಳಿದ್ದ್ ಹಾಲನ್ನ.
87. ಮೊನ್‌ಕಂಡ ಕೊತ್ತಿನಂಗೆ.
88. ಒಲೆ ಕೋಳಿ ಒಕ್ಕಿದೆ.
89. ಎತ್ತ್‌ನ ಬೇನೆಗೆ ಕೋಣಕ್ಕೆ ಬರೆಹಾಕಿತ್.
90. ಇಬ್ಬರ ಮನಸ್ಸ್ ಘುಳ್ಳುಹುಳ್ಳಂಗೆ.
91. ರಾಯರ ಕುದುರೆ ಕತ್ತೆ ಆದಂಗೆ.
92. ಕಾಂಬಕನ ಬಾರದ ಸಿಟ್ಟ್ ಉಂಬಕನ ಬಾತ್.
93. ಬೇರೊಬ್ಬನ ಕೋಪಲಿ ಮೈಯೆಲ್ಲ ಪರ್ಚಿಂಕಾತ್.
94. ಮೀಸೆ ಕೀಳ್‌ಕನ ಬಾರದ ಸಿಟ್ಟ್ ರೋಮ ಕೀಳ್ಕನ ಬಾತ್.
95. ಕರ್ಜೂರ ಹಣ್ಣಾಕನ ಕಕ್ಕೆ ಬಾಯಿ ಹುಣ್ಣಾದಂಗೆ.
96. ಕುರ್ಡಂಗೆ ಸೂಟೆ ಕೊಟ್ಟಾಂಗೆ.
97. ಕಿವುಡನ ಕೈಲಿ ಕಿನ್ನರಿ ಕೊಟ್ಟಂಗೆ.
98. ಕೋಣನ ಮುಂದೆ ಕಿನ್ನರಿ ಬಾರ್ಸಿದಂಗೆ.
99. ಲೆಕ್ಕಕ್ಕುಟ್ಟು ಅಳ್ತೆಗಿಲ್ಲೆ.
100. ಕಡ್ಡವೆಗೆ ಕಾಲ್ ಬೊಚ್ಚಿಕನ ನಾಯಿಗೆ ಉಚ್ಚೆ ಬಾತ್.
101. ಕೆಲ್ಸಕ್ಕೆ ಕಳ್ಳ ತಿಂಬಕೆ ಮಳ್ಳ.
102. ಕಾಸಿಲ್ಲದಂವ ದೋಣಿಗೆ ಮುಂದೆ ಕಾಲ್ ಹಾಕೊಕು.
103. ದೀಪಕ್ಕೆ ಹಾಕಿದ ಎಣ್ಣೆ ಆರ್‌ಕನ ಮುಟ್ಟ.
104. ಪಾಪದ ಕೊಡಪ್ಪಾಣ ತುಂಬೊಕು.
105. ಹೊಟ್ಟೆ ತುಂಬಿದವಂಗೆ ಯಾವ ಇಚ್ಚೆ ಉಟ್ಟು.
106. ಕುದ್ಕನ ಬೇಟೆ ಆಕನೇ ಗೊತ್ತು.
107. ಇರ್‌ಕನ ರಾಜ ಕೈತಪ್ಪುಕನ ಕುರೆ.
108. ಬೋಪನ ಕಥೆಲಿ ಅಪ್ಪಂಗೆ ಕಷ್ಟಾತ್.
109. ನಂಜೆಳಂಗೆ ಮೊಟ್ಟೆಲಿ ಕಿಚ್ಚಿ.
110. ಸುಟ್ಟ್‌ತಿಂಬಕೆ ಗೇಣ್ ಉದ್ದ ಗೆಣಸ್ ಇಲ್ಲೆ.



6

# ಪದ – ಪದಾರ್ಥಗ

1. **ಅಂಗಿ :** ಸಂಸ್ಕೃತದ 'ಅಂಗಿನ್' ಎಂಬ ಪದಕ್ಕೆ ಅಂಗಗಳ್‌ಂದ ಕೂಡ್‌ದ, ಅವಯವಗಳ್‌ಂದ ಕೂಡ್‌ದ, ಮುಖ್ಯವಾದ ತ ಅರ್ಥವುಟ್ಟು. ಅಂಗಾನಿ ಅಸ್ಯ ಸಂತಿ ಎಂಬ ಅರ್ಥಲಿ ಅಂಗ ಶಬ್ದಕ್ಕೆ ಇನಿಃ ತೇಳುವ ಪ್ರತ್ಯಯ ಸೇರ್‌ದೆ. ಇದಿಕ್ಕೆ ಅಂಗ ಇರುದು ತೇಳುವ ಅರ್ಥ. ಅಂಗಿನ್ ಶಬ್ದ ಕನ್ನಡಲಿ ಅಂಗಿ ಆದೆ. ಅರೆಬಾಸೆಲು ಅಂಗಿತೇಳುವ ಪದನ ಬಳ್‌ಸುವೆ. ಆಗ ಅದಿಕೆ ಮೈಗೆ ಧರ್‌ಸುವ ಉಡುಪು, ಕವಚತೇಳುವ ಅರ್ಥ ಬಂದದೆ.

ಒಂದು ಗಾದೆ ಉಟ್ಟು – 'ಅಂಗಿಕೊಟ್ಟು ಭಂಗಿ ಸೇದಿ ಮಂಗನಾತ್'. ಭಂಗಿನ ಮೇಲಿನ ಆಸೆಂದ ತಾನು ಹಾಕಂಡಿದ್ದ ಅಂಗಿನ ಕೊಟ್ಟು ಅದಿಕೆ ಬದಲಾಗಿ ಭಂಗಿನ ತಗಂಡ್ ಸೇದಿತ್‌ಗಡ. ಆಮೇಲೆ ಬೆತ್ತಲೆ ಓಡಾಡಕಾತ್‌ಗಡ. ಅವ ಮಂಗನಲ್ಲದೆ ಬೇರೇನ್? ಅಂಗಿ ಶಬ್ದನ ಬೇರೆ ಶಬ್ದಗಳೊಟ್ಟಿಗೂ ಸೇರ್‌ಸಕ್. ಆಗ ಬಗಲಂಗಿ, ನಿಲುವಂಗಿ, ದೊಡ್ಡಂಗಿ, ಗಿಡ್ಡಂಗಿ ಹಿಂಗೆ ಶಬ್ದಗಳಾದೆ.

2. **ಅಂಜುಬುರುಕ:** ಕನ್ನಡಲಿ 'ಪುರುಕ' ತೇಳುದು ಒಂದು ವ್ಯಕ್ತಿವಾಚಕ ಪ್ರತ್ಯಯ. ವಿಶಿಷ್ಟ ಸ್ವಭಾವನ ಹೇಳ್‌ಕನ ಈ ಪ್ರತ್ಯಯನ ಸೇರ್‌ಸೊಕು. ಅಂಜು=ಹೆದರ್ ಹೆದರುವ (ಅಂಜುವ) ಸ್ವಭಾವದಂವ ಅಂಜು ಬುರುಕ. ಅಂಜು+ಪುರುಕ=ಅಂಜುಬುರುಕ. ಸಮಾಸಲಿ 'ಪ' ಕಾರ 'ಬ' ಕಾರ ಆಗುಟು. ಅರೆಬಾಸೆಲಿ ಅಂಜುಬುರುಕನ ಹೆದರ್ ಪುಕ್ಲತನು ಹೇಳುವೆ. ಪುಕ್ಕಲ್ ಸ್ವಭಾವತೇಳ್‌ರೆ ಹೆದರುವ ಗುಣದವತ ಬಳ್‌ಸುವೆ. ಇನ್ನ್ ಅಳುಬುರುಕ ತೇಳ್‌ರೆ ಮರ್‌ಡುವ ಸ್ವಭಾವದಂವ, ಹೀಂಗೆನೆ ಲಂಚಬುರುಕ, ಸುಳ್ಳುಬುರುಕ, ಚಾಡಿಬುರುಕತ ಶಬ್ದಗಳ್‌ನ ಮಾಡಿರೆ ಸ ತಪ್ಪಾದುಲ್ಲೆ. ಇವೆಲ್ಲ, ಈಗ ಮಾಮೂಲಿ ಪ್ರಚಾರಕ್ಕೆ ಬರುತ್ತಿರುವ ಪದಗ.

3. **ಅಂತಸ್ತು :** ಕನ್ನಡಲಿ ಪ್ರಚಾರಲಿರುವ ಈ ಶಬ್ದನ ಮೂಲ ನಿಶ್ಚಯ ಆತ್‌ಲ್ಲೆ. ಸಂಸ್ಕೃತದ ಅಂತಃಸ್ಥ ತೇಳುವ ಶಬ್ದನ ಕೆಲವು ನಿರ್ದೇಶಿಸುವೆ. ಅಂತಃಸ್ಥ, ಅಂತಸ್ಥಿತ ಎಂಬ ಪದಗಳಿಗೆ ನಡುಲಿ ಸೇರ್‌ಸಿದ, ಒಳಗ್‌ನ, ಒಳಗಿರುವತೇಳುವ ಅರ್ಥಉಟ್ಟು. ಆದ್ದರ್‌ಂದ ಅಂತಸ್ತು ತದ್ಭವ ಆಗಿರುದು. ಕನ್ನಡಲಿ ಅಂತಸ್ತು ಪದಕ್ಕೆ ಒಂದರ ಮೇಲೆ ಒಂದ್ ಸೇರ್‌ಸುದು, ಮಹಡಿ, ಉಪ್ಪರಿಗೆ, ದರ್ಜೆ, ಮಟ್ಟತೇಳುವ ಅರ್ಥ ಉಟ್ಟು. ಅರೆಬಾಸೆಲಿ ಮಾಳಿಗೆ, ಮಾಡಿ ತೇಳುವ ಪದನ ಬಳ್‌ಸುವೆ.

**ಡಾ। ಕೋರನ ಸರಸ್ವತಿ ಪ್ರಕಾಶ್**

ಆಧಾರ

ಜಿ. ವೆಂಕಟಸುಬ್ಬಯ್ಯ–ಇಗೋ ಕನ್ನಡ.

# ಮನೆಮದ್ದ್

1. **ಕೆಸ್ರ್ ಹುಣ್ಣಿಗೆ :** ರಾತ್ರಿ ಕಾಲ್‌ಗಳ್ನ ಲಾಯ್ಕಾಗಿ ತೊಳ್ದ್ ಆರ್ಸಿದ ಮೇಲೆ ಈ ಮದ್ದ್ ಹಾಕಕು. ಕಾಫಿ ಮತ್ತೆ ಯಾಲಕ್ಕಿ ತೋಟಗಳ್ಲಿ ಕಾಂಬಕೆ ಸಿಕ್ಕುವ ದೊಡ್ಡ ತಿಮರೆ (ಎಮ್ಮೆ ತಿಮರೆ)ನ ತಂದ್ ಓಡುಲಿ ಅದ್ ಕಪ್ಪು ಆಗುವ ಹಂಗೆ ಹೊರ್ದ್ ಅದರ ಹೊಡಿ ಮಾಡಕು. ಈ ಹೊಡಿಗೆ ಬೇವಿನೆಣ್ಣೆ ಹಾಕಿ ಕೋಳಿ ಗರಿಲಿ ಹುಣ್ಣಿರುವ ಜಾಗಕ್ಕೆ ದಿನಕೆ 2–3 ಸರ್ತಿ ಸವುರಕು. ಆ ಸಮಯಲಿ ಒಂದೆರಡ್ ದಿನ ಕೆಸ್ರ್‌ಗೆ ಹೋಕಾಗದ್. ಹಿಂಗೆ ಮಾಡಿರೆ ಕೆಸ್ರ್ ಹುಣ್ಣು ಗುಣ ಆದೆ.

2. ಸಳಿಜರಕೆ – ಶೀತಂದ ಬರುವ ಸಳಿಜರಕೆ ಗಜ್ಜುಗ (ಚಿಟ್ಟಿ ಗೋಲಿ) ಗಿಡದ 2–3 ಕೊಡಿನ ತಂದ್ ಅದಿಕೆ ಸ್ವಲ್ಪ ಬೆಳ್ಳುಳ್ಳಿ, ಒಳ್ಳೆಮೆಣ್ಸ್ ಸೇರ್ಸಿ ಅರ್ದ್ ಸಿಕ್ಕುವ ರಸನ ಒಲೆ ಮೇಲೆ ಮಡ್ಗಿ, ಕುದ್ಸಿ, ಸೋಸಕು. ಈ ರಸಾಯನನ ದಿನಕೆ 2–3 ಸರ್ತಿ ಕುಡ್ಸಿರೆ ಸಳಿಜ್ವರ ಗುಣ ಆದೆ.

3. ನರ್ಪಜ (ಬಿಳಿ ಜುಂಗುನ ದಪ್ಪ ಕಂಬಳಿ ಹುಳ) ಮುಟ್ಟಿರೆ – ಸಣ್ಣ ಬರೆಗಳ್ಲಿ ಬೆಳ್ದಿರುವ ಹುಲಿ ಉಗುರು ಗಿಡಗಳ ತಂದ್ ನರ್ಪಜ ಮುಟ್ಟಿದಲ್ಲಿಗೆ ಉಜ್ಜುತಿದ್ದರೆ ತೊರ್ಸಟ ಇಲ್ಲದಾದೆ.

4. ಎಳೆ ಪ್ರಾಯಲಿ ತಲೆ ಕೂದ್ಲ್ ಬೆಳ್ಳಂಗಾಗಿದ್ದರೆ – ಗದ್ದೆಗಳ ಕಿಕ್ಕ್‌ರಿ (ಕೆಳಗಿನ) ಏರಿಲಿ ಮಣ್ಣ್ ಮಡ್ಗಿದಲ್ಲಿ ಹುಟ್ಟಿರುವ ಗರ್ಗ (ಭೃಂಗರಾಜ)ನ ತಂದ್ ಕುಟ್ಟಿ ರಸ ತೆಗ್ದ್ ತಲೆಗೆ ಉಜ್ಜಿ, 1–2 ಗಂಟೆ ಕಳ್ದ್ ತಲೆ ತೊಳ್ದರೆ ಬಿಳಿ ಕೂದ್ಲ್ ಕಪ್ಪಾದೆ.

5. ಕಟ್ರ (ಅಜೀರ್ಣ) ಆಗಿದ್ದರೆ ಕಟ್ರ ಬಳ್ಳಿ (ಅರಿಕೆ ಬಳ್ಳಿ) ಸೊಪ್ಪುನ ಕುಟ್ಟಿ ರಸ ತೆಗ್ದ್ ಅದಿಕೆ 2–3 ಒಳ್ಳೆಮೆಣ್ಸ್ ಮತ್ತೆ 2–3 ಎಸ್ಳ್ ಬೆಳ್ಳುಳ್ಳಿ ಸೇರ್ಸಿ ಕಸಾಯ ಮಾಡಿ ಕುಡ್ಸಿರೆ ಕಟ್ರ ವಾಸಿ ಆದೆ.

6. ಉಗುರು ಸುತ್ತಿಗೆ – ಬೆಳ್‌ದ ಕೌಂಟೆಕಾಯಿ (ಕವಟೆ ಕಾಯಿ)ನ ತಂದ್ ಅದರ ತೂತ ಮಾಡಿ ಉಗುರು ಸುತ್ತು ಆದ ಬೆರಳ್‌ನ ಅದರೊಳಗೆ ಇಟ್ಟಕಣಕು. ಹಿಂಗೆ 1–2 ದಿನ ಮಾಡ್ರೆ ಉಗುರು ಸುತ್ತು ಇಲ್ಲದಾದೆ.

7. ಬಾಯಿ ಹುಣ್ಣಿಗೆ – ನುಗ್ಗೆ ಮರದ ಎಳೇ ಸೊಪ್ಪುನ ತಂದ್, ತೊಳ್ದ್, ಬಾಯೊಳಗೆ ಹಾಕಿ, ಲಾಯ್ಕಾಗಿ ಅಗ್ದ್ ತಿಂದರೆ ಬಾಯಿ ಹುಣ್ಣ್ ಗುಣ ಆದೆ.



7

8. ಕಣ್ಣಿರಿ, ಕಣ್ಣ್ ಕೆಂಪಗಿದ್ದರೆ – ಬರೆಗಲ್ಲಿ ಹಬ್ಬಿರುವ ಪಾಂಡಿ ಬಳ್ಳಿದ್ ತೊಂಬೆ (ಹೃದಯ) ಹಂಗಿರುವ ಸೊಪ್ಪುಗಳ ತಂದ್, ತೊಳ್ದ್, ಅರಕಲ್ಲ್‌ಲಿ ಅರ್ದ್ ಕಣ್ಣ್ ರೆಪ್ಪೆಗಳ ಮೇಲೆ ಮಡ್ಗಿ ಮಲ್ಗಿರೆ ಕಣ್ಣ್‌ಂದ ಒಂದೇ ಸಮ ನೀರ್ ಹೊರಗೆ ಹರ್ದ್, ಕಣ್ಣಿರಿ ವಾಸಿ ಆದೆ.

9. ಕೆಮಿ ಬೇನೆಗೆ –ಒಂದೆರಡ್ ನೀರುಳ್ಳಿ ಗೆಂಡೆಗಳ ತುರ್ದ್ ಒಂದು ಚಮಚದಷ್ಟ್ ರಸ ತಕಣಕು. ಈ ರಸನ ಸಣ್ಣ ಉರಿಲಿ ಬಿಸಿ ಮಾಡಿ ದಿನಕ್ಕೆ ಎರಡ್ ಸಲದಂತೆ ಎರಡ್ ಹನಿಗಳಷ್ಟ್ ಕೆಮಿಗೆ ಹಾಕ್‌ತಿದ್ದರೆ ಕೆಮಿ ಬೇನ ಗುಣ ಆದೆ.

10. ಸುಟ್ಟ ಗಾಯಗಳಿಗೆ – ಒಳ್ಳ ಹಣ್ಣಾದ ಬಾಳೆ ಹಣ್ಣ್‌ನ ಕೈಲಿ ಲಾಯ್ಕಾಗಿ ಕಿವುಂಚಿ (ಕಿವುಚಿ) ಸುಟ್ಟಗಾಯಗಳಿಗೆ ಲೇಪ ಹಾಕ್‌ತ್ತಿದ್ದರೆ ಗಾಯಗಳ ಉರಿ ಮತ್ತೆ ಗುಳ್ಳೆಗ ಇಲ್ಲದಾದೆ.

11. ಅಂಗಾಲ್ ಒಡ್‌ದಿದ್ದರೆ – ಹಾಗಲ ಬಳ್ಳಿನ ಸ್ವಲ್ಪ ಸೊಪ್ಪು ತಂದ್ ಕುಟ್ಟಿ ರಸ ತೆಗ್ದ್ ಒಡ್ಡ ಹಿಮ್ಮಡಿ ಮತ್ತೆ ಪಾದಗಳಿಗೆ ಲೇಪ ಹಾಕ್‌ತ್ತಿದ್ದರೆ ಒಡ್ಡ ಭಾಗಗ ಕೂಡಿಕಂಡವೆ.

12. ಅರಿಶಿನ ಕಾಮಾಲೆಗೆ – ಒಂದು ವಾರ ಮುಟ್ಟ ದಿನಾ ದೊಡ್ಡಪತ್ರೆ (ಸಾಂಬ್ರಾಣಿ) ಎಲೆಗಳ ತಿಂತಾ ಇದ್ದರೆ ಅರಿಶಿನ ಕಾಮಾಲೆ ರೋಗ ವಾಸಿ ಆದೆ.

13. ದೊಂಡೆ (ಗಂಟ್ಲು) ಬೇನೆಗೆ – ಉಗುರು ಬೆಚ್ಚಗಿನ ನೀರಿಗೆ ಒಂದು ಚಿಟಿಕೆ ಅರಿಶಿನ ಮತ್ತೆ ಸ್ವಲ್ಪ ಉಪ್ಪು ಬೆರ್ಸಿ ಆ ನೀರ್‌ಲಿ ಪದೇ ಪದೇ ಬಾಯಿ ಮುಕ್ಕುಳಿಸಿರೆ ದೊಂಡೆ ಬೇನೆ ನಿವಾರಣೆ ಆದೆ.

14. ಸಣ್ಣ ಮಕ್ಕಳ ಕಫಕ್ಕೆ – ಸಣ್ಣ ಚುಂಡೆದ್ ಎರ್ಡ್ ಬೇರ್‌ಗಳ ತಂದ್ ಒಂದ್‌ನ ಹಸಿಯಾಗಿ ಮತ್ತೊಂದ್‌ನ ಬಿಸಿಮಾಡಿ, ರಸ ತೆಗ್ದ್ ಅದಿಕೆ ಒಂದು ಒಳ್ಳೆ ಮೆಣ್ಸ್ ಕಾಳ್‌ನ ಸೊಲ್ಪ ಸಂಪ್ದ್ ಕುಡ್ಸಿರೆ ಕಫ ಗುಣ ಆದೆ.

15. ಒತ್ತಲೆ ನೋವು (ಅರೆತಲೆ ನೋವು)ಗೆ– ತುಂಬೆ ಸೊಪ್ಪುನ ನುಣ್ಣಗೆ ಅರ್ದ್ ಅದರ ಹದ ಆಗಿ ಬಿಸಿ ಮಾಡಿ ಹಣೆಗೆ ಲೇಪ ಹಾಕಿರೆ ಒತ್ತಲೆ ನೋವು ಗುಣ ಆದೆ.

16. ಕೆಮಿ ಸೋರುತಿದ್ದರೆ – ಕಾಮ ಕಸ್ತೂರಿಗಿಡದ ಸೊಪ್ಪುನ ತಂದ್ ಕಾಯೆಣ್ಣೆ (ತೆಂಗಿನೆಣ್ಣೆ) ಯೊಟ್ಟಿಗೆ ಬಿಸಿಮಾಡಿ ಅದ್ ತಣ್ಣಗಾದ ಮೇಲೆ ಎರಡ್‌ಹನಿ ಎಣ್ಣೆನ ಎರಡೊತ್ತು ಕೆಮಿಗಳಿಗೆ ಹಾಕ್‌ತಿದ್ದರೆ ಕೆಮಿ ಸೋರುದು ವಾಸಿ ಆದೆ.

17. ನಾಲಿಗೆ ಅಗ್ರಕೆ – ಪೇರಳೆ ಗಿಡದ ಚಿಗ್‌ರ್‌ನ ಬಿಸಿ ನೀರ್‌ಲಿ ಅರ್ದ್ ಒಂದು ಹೊತ್ತಿಗೆ ಒಂದ್ ಚಮಚದಷ್ಟ್ ಕುಡುಸಕು. ಇದ್ರಿಂದ ಅಗ್ರ ವಾಸಿ ಆದೆ.

18. ಬಿಳಿ ಮಚ್ಚೆ (ಚಿಬ್ಬು)ಗೆ – ಎರಡ್ ಹಿಡಿಯಷ್ಟ್ ಮದರಂಗಿ ಸೊಪ್ಪುನ 1/2 ಲೀಟರ್ ನೀರಿಗೆ ಹಾಕಿ ಕುದ್ಸಿ 2 ಲೋಟದಷ್ಟ್ ಆಕನ ಇಳ್ಸಿ, ತಣ್ಸಿ

ಕುಡಿಯಕು. ಇದ್ರಿಂದ ಚಿಬ್ಬು ಇಲ್ಲದಾದೆ.

19. ಪಿತ್ತವಿಕಾರಗಳಿಗೆ – ನಾಲ್ಕ್ ದೊಡ್ಡ ಪತ್ರೆ ಸೊಪ್ಪುಗೆ ಎರ್ಡ್‌ಕಲ್ಲ್ ಉಪ್ಪು ಹಾಕಿ ರಸ ತೆಗ್ದ್ ಬೆಳಿಗ್ಗೆ ಖಾಲಿ ಹೊಟ್ಟೆಗೆ ನಾಕ್ ದಿನ ಕುಡ್ದರೆ ಪಿತ್ತದ ತೊಂದರೆಗ ಹೊರ್‍ಟ್ ಹೋದೆ.

20. ಕುರುನ ಹಣ್ಣ್ ಮಾಡಿಕೆ – ಅತ್ತಿಮರದ ಹಾಲ್‌ನ ಕುರುನ ತುದಿನ ಬುಟ್ಟ್, ಕುರುನ ಸುತ್ತ ಮೂರು ಸರ್ತಿನಂಗೆ ಒಂದು ವಾರಕೆ ಮುಟ್ಟ ಉಜ್ಜಿರೆ ಕುರು ಹಣ್ಣಾದೆ.

21. ಚಳಿಗಾಲಲಿ ಹೆಚ್ಚಾಗುವ ಕಾಲ್‌ಬೇನೆಗೆ – ಕರಿ ಉಮ್ಮತ (ದತ್ತೂರಿ) ಗಿಡದ ಎಲೆಗಳ ರಸ ತೆಗ್ದ್ ನೋವಿರುವಲ್ಲಿಗೆ ಉಜ್ಜುತಿದ್ದರೆ ನೋವು ಕಡಿಮೆ ಆದೆ.

✍ಕುಲ್ಲಚನ ಜ್ಯೋತಿ ಕಾರ್ಯಪ್ಪ

ಕುಂಬಳದಾಳು ಗ್ರಾಮ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್‍ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಮದ್ದ್‌ನ ಬಂಡಾರ – ಕೆಸ

# ಕೆಸ ಮದ್ದಿಗೂ ಬೇಕ್, ಊಟಕೂ ಬೇಕ್

ನಂಗೆ ಗೊತ್ತಿರ್‌ವಂಗೆ ಕೆಸಂತೇಕ್ರೆ ನಾಡ್‌ಲಿ ಹುಟ್ಟಿ ಬೆಳ್‌ದವುಕ್ಕೆ ಮಾತ್ರ ಇದ್ ಗೊತ್ತಿರ್‌ದು. ಕೆಸಲಿ ಸುಮಾರ್ ಏಳ್ ಬಗೆನ ಕೆಸ ಉಟ್ಟು.

**1. ಕರಿ ಕೆಸ :** ಇದ್ ತೋಡ್ ಕರೆಲಿ, ಹೊಳೆ ಕರೆಲಿ ಜಾಸ್ತಿ ಇದ್ದದೆ. ಇದ್ ಬಹು ವಳ್ಳ ನಾಡ್‌ಮದ್ದ್. ಹೆಂಗೆತ್ತೇಕ್ರೆ ಹೆತ್ತ ಹೆಣ್ಮಕ್ಕ ಹೆತ್ತ್ 2,3 ದಿನಲಿ ಬಾಣಂತಿಗಳಿಗೆ ಕೆಲವುಕ್ಕೆ ಬಾರಿ ಹೊಟ್ಟೆ ಬ್ಯಾನೆ ಬಂದದೆ. ಅದ್ ಹೊಟ್ಟೆ ವಳಗೆ ಕೂಸ್ ಹೆಂಗೆ ಮಗ್ದ್‌ದೇ ಹಂಗೆ ಹೊಟ್ಟೆ ವಳಗೆ ಅದ್ ಮಗ್‌ದದೆ. ಅದ್ ಕೂಸುನ ಹುಡುಕುದುಂತ ನಮ್ಮ ಹಿರಿಯವು ಹೇಳ್‌ವೆ. ಅದರ ಗೆಂಡೆ ಬ್ಯಾನೆಂತ ಸಹ ಹೇಳ್‌ವೆ. ಅದ್‌ಕ್ಕೆ ಈ ಕೆಸನ 2 ದಂಡ್‌ನ ತಂದ್ ಮುರ್ದ್ ಎಣ್ಣೆ ಹಾಕಿ ಸ್ವಲ್ಪ ವಳ್ಳ ಮೆಣ್‌ಸ್‌ನ ಹೊಡಿ, ಉಪ್ಪು ಹಾಕಿ ಬೇಸಿ, 2,3 ಹೊತ್ತ್ ಬಾಣಂತಿಗೆ ಊಟಕ್ಕೆ ಕೊಟ್ಟರೆ ಬಾಣಂತಿನ ಗೆಂಡೆ ಹೊಟ್ಟೆ ಬ್ಯಾನೆ ಮಾಯಾದೆ.

**2. ತೋಡ್ ಕೆಸ (ಬಿಳಿ ಕೆಸ) :–** ಇದ್ ಸನ ಹೊಳೆಕರೆಲಿ, ತೋಡ್‌ಕರೆಲಿ ಅಂದರೆ ನೀರ್‌ನ ಪಸೆ ಇರ್‌ವಲ್ಲಿ ಬೆಳ್ದದೆ. ಇದರ ಸುಳಿ ಚಿಗ್‌ರ್‌ನ ತಂದ್ ನಾರ್ ತೆಗ್‌ದ್ ನಾಕ್ ಬೇಳೆ ಮಾಡ್ದ ಲಾತ್ ಕಾಳ್‌ನೋ, ಮೊಳಕೆ ಬರ್‌ಸಿದ ಕುಡುನವಟ್ಟಿಗೆ ಹಾಕಿ ಗೈಪು ಮಾಡೊಕ್. ಇಲ್ಲರೆ ಬರೀ ಕೆಸನ ಚಿಗ್‌ರ್‌ನೇ ಮಸಾಲೆ ಹಾಕಿ ನಿಂಬುಳಿ ಹಿಂಡಿ ಗೈಪು ಮಾಡಕ್. ಮತ್ತೆ ಮಾಡ್‌ದ ಗೈಪುಗೆ ಬೆಳ್ಳುಳ್ಳಿ ಕುಟ್ಟಿ ಹಾಕಿ ಅಗ್ರಣೆ ಮಾಡ್‌ರೆ ರೊಟ್ಟಿ ತಿಂಬೊಕೆ ಬಾರಿ ಲಾಯಿಕ.

**3. ತೋಂಡಿ ಕೆಸ :** ಇದ್ ಸನ ಮನೆಹತ್ರ ಹಿತ್ಲ್‌ಲಿ ಸ್ವಲ್ಪ ಶೀತ ಇರ್‌ವಲ್ಲಿ ಬೆಳ್ದ್‌ದೆ. ಬಣ್ಣ ನೋಡಿಕೆ ಕರಿ ಕೆಸಗಿಂತ ಸ್ವಲ್ಪ ಕೆಂಪು ಇದ್ದರೆ ಎಲೆಗ ಬಾರಿ ಅಗಲ ಇದ್ದದೆ. ದಂಡ್ ಉರುಟ್ ಆಗಿದ್ದದೆ – ಇದರ ಸುಳಿ ದಿಂಡ್‌ನ ತಂದ್ ನಾರ್ ತೆಗ್‌ದ್ ಸಣ್ಣ ಕೊಯಿದ್, ನಾಕ್ ಹಲ್‌ಸ್‌ನ ಬಿತ್ತೋ, ನಾಕ್ ಲಾತ್‌ಕಾಳ್‌ನೋ ಬೇಳೆ ಮಾಡಿ ಹಾಕಿ ಮಸಾಲೆ ಕೂಡಿ, ನಿಂಬುಳಿ ಹಿಂಡಿ ಗೈಪು ಮಾಡ್‌ರೆ ಊಟಕ್ಕೆ ಬಾರಿ ಲಾಯಿಕ್– ಇದರೊಟ್ಟಿಗೆ ಒಂದು ಚೂರು ಸುಟ್ಟ ಮೀನ್ ಇದ್ದರೆ ಇನ್ನೂ ಲಾಯಿಕ್.

**4. ಮಲಿಯಾಳ ಕೆಸ :** ಇದರ್ನ ಹಿಂದೆಲ್ಲ ತುಂಬಾ ಬೆಳಿತ್ತಿದ್ದೊ. ಸಾಧಾರಣದವರ ಮನೇಲಿ ಗೈಪು ಎಂತಂತ ಕೇಳ್‌ರೆ ಕೆಸನ ಪೊಜ್ಜಿ ರೊಟ್ಟಿಂತ ಹೇಳ್‌ತ್ತಿದ್ದೊ. ಇದರ ದಂಟ್‌ನ ತಂದ್ ನಾರ್ ತೆಗ್‌ದ್ ಒಂದ್ ಬೆರ್‌ಳುದ್ದ ಕೊಯ್ದ್ ಅದರೊಟ್ಟಿಗೆ ನಾಕ್ ಸಣ್ಣ ಮೆಣ್‌ಸ್ (ಗಾಂದಾರಿ ಮೆಣ್‌ಸ್) ನ ಉಪ್ಪು ಹಾಕಿ ಬೇಸೋಕು. ಇದರೊಟ್ಟಿಗೆ 1 ನೀರುಳ್ಳಿ, 2,3 ಕಾಯಿಚೂರ್ ಹಾಕಿ ಕಡಿಯ ಕಲ್ಲ್‌ಲಿ ಕಡ್‌ದ್ ಅದ್‌ಕ್ಕೆ ನಿಂಬುಳ್ಳಿ ಹಿಂಡಿ, ಬೆಳ್ಳುಳ್ಳಿ ಹಾಕಿ ಅಗ್‌ರಣೆ ಮಾಡ್‌ರೆ ಕೆಸನ ಪೊಜ್ಜಿ ತಯಾರ್.

**5. ಮರ ಕೆಸ :** ಇದ್ ಬೆಳಿಯೋದು ಬಾರಿ ವಿಶೇಷಲಿ. ಹೆಂಗೆ ಗೊತ್ತಾ ಮರದ ಕೊಡೀಲಿ, ಪೊಟ್ಟರೆ ವಳಗೆ, ಕೊಂಬೇಲಿ, ಕೆಲವೊಂದು ನೆಲಲಿ ಬೆಳ್‌ದದೆ. ಇದ್‌ಕೆ ಮಾತ್ರ ಬ್ರಹ್ಮನ ಶಾಪ ಕಂಡದೆ. ಯಾರ್ ನೀರ್ ಹೊಯೋದು ಬ್ಯಾಡ, ಗೊಬ್ಬರ ಹಾಕುದು ಬ್ಯಾಡ, ಹುಳಕ್ಕೆ ಮದ್ದ್ ಸಿಂಪಡ್‌ಸುದು ಬ್ಯಾಡ. ಇದ್‌ಕೆ ಆಟಿ ತಿಂಗ ಬಾತ್‌ಣ್ಣೆಳ್ತ್ರೇ ಬಾರಿ ಬೇಡಿಕೆ ಉಟ್ಟು. ಪೇಟೇಲಿ ಇರವು ದುಡ್ಡು ಕೊಟ್ಟೇ ತಕಣಕು. ಕೆಲವು ಜನ ನಾಡ್ಸ್‌ನವು, ಪೇಟೆವುಕ್ಕೆ ಮಾರಿ ಹಣನೂ ಸಂಪಾದನೆ ಮಾಡಿವೆ. ಆಟಿ ತಿಂಗಲಿ ಇದರ ಎಲೆನ ತಂದ್ ಲಾಯಿಕ ತೊಳ್ದ್. ಸಣ್ಣಕೊಯ್ದಿ ಪದ್‌ನ್ದ್ ಅಕ್ಕಿನೊಟ್ಟಿಗೆ ತೆಂಗಿನಕಾಯಿ, ಉಪ್ಪು, ಮೆಣ್‌ಸ್, ಹುಳಿ, ಸಂಬಾರ, ಜೀರಿಗೆ ಎಲ್ಲಾ ಮಸಾಲೆ ಹಾಕಿ ಕಡ್ದ್ ಬಾಳೆಲೆಲಿ ಕೂಗಲಿಟ್ಟ್‌ನಂಗೆ ಮಡ್‌ಚಿ ಕಳ್‌ಸಿಗೇಲಿ ಬೇಸುವೆ. ಕೆಲವು ಬಂದನ ಬಟ್ಲ್‌ಗೆ ಹೊಯ್ದ್ ಬಟ್ಲ್‌ಹಿಟ್ಟ್‌ನಂಗೆ ಕಳಸ್‌ಗೇಲಿ ಬೇಸುವೆ. ಬೆಂದ್ ಮ್ಯಾಲೆ ಹೋಳ್ ಹೋಳ್ ಕೊಯ್ದ್, ನೀರುಳ್ಳಿ ಸಾಸ್‌ವೆ, ಅಗ್ರಣೆ ಸೊಪ್ಪು ಹಾಕಿ ಎಣ್ಣೆಲಿ ಹೊರದರೆ ಪತ್ರೊಡೆ ಊಟಕ್ಕೆ ತಯಾರ್.

ಇನ್ನ್ ಕೆಲವು ಜನ ಅಕ್ಕಿನ ಸೊಪ್ಪುನ ಕಡ್ದ್, ಮಸಾಲೆ ಬ್ಯಾರೆ ಹಾಕಿ ವಲೇಲಿ ಕೊದ್ದಸುವೆ. ಈ ಕೆಸದ ದಂಟ್‌ನ ನಾರ್ ತೆಗ್ದ್ ಲಾತ್‌ಕಾಳ್, ಕಡ್ಲೆಕಾಳ್ ಎಂತಾರ್ ಹಾಕಿ ಗೈಪು ಮಾಡ್‌ವೆ. ಹಿಂಗೆ ವರ್ಷಕ್ಕೊಂದು ಸಲ ಆಟಿ ತಿಂಗಳ್ಲಿ ತಿಂಬೊದರ್‌ಂದ ಹೊಟ್ಟೆ ವಳಗೇನ ಕೂದಲ್ ಕಸ ಎಲ್ಲಾ ಹೊದೇಂತ ನಮ್ಮ ಹಿರಿಯವ್ರ ನಂಬಿಕೆ.

**6. ಗೆಂಡೆ ಕೆಸ :** ಇದರ ಹಿಂದೆಲ್ಲಾ ಮನೆ ಕರ್ಚಿಗೇಂತ ಹಿತ್ಲ್‌ಲಿ ನಾಕಾರ್ ಬುಡ ನೆಟ್ಟ್‌ಕಣ್ತ್ತಿದ್ದೊ. ಎಲ್ಲೊ ಒಬ್ಬೊಬ್ಬ ಮಾತ್ರ ಅಂಗ್‌ಡಿಗೆ ಕೆ.ಜಿ.ಗೆ 4,5 ರೂಪಾಯಿಗೆ ಮಾರ್ತ್ತಿದ್ದೊ. ಆಗ ಅದ್‌ಕ್ಕೆ ಅಷ್ಟೆಕ್ರಯ ಇದ್ದದ್. ಈಗ ಅಂತೂ ಮೂಡ್‌ಸಿಮೆ ಕಡೆ ಹೊದ್‌ರೆ, ಎಕ್ರೆಗಟ್ಟ್‌ಲೆ ಬೆಳ್ದವೆ. ಅದ್‌ಕೆ 3–4 ಸಲ ಕಂಪೆನಿ ಗೊಬ್ಬರ ಹಾಕಿ 3–4 ಸಲ ಬುಡಕ್ಕೆ ಮಣ್ಣ್ ಹಾಕಿ ದೂಪೆನಂಗೆ ಮಾಡ್ವೆ, ಯಾಕೆ ಇಷ್ಟೆಲ್ಲ ಕಷ್ಟಪಟ್ಟ್ ಬೆಳ್ದವೆತ ಗೊತ್ತಾ? ಅದರ ಕ್ರಯ ಹನಿಮನಿ ಅಲ್ಲಾ..? ಕೆ.ಜಿ.ಗೆ 50–100 ಗಂಟ ಉಟ್ಟು. ಇದರ್ನ ಉಪ್ಪು ಹಾಕಿ ಬೇಸಿ ತಿಂದವೆ. ಅಲ್ಲದೆ ಬೆಳೆಕಾಳ್‌ನೋ, ಲಾತ್‌ಕಾಳ್‌ನೋ, ಬೇಳೆ ಮಾಡಿಹಾಕಿ ಪಲ್ಯನು ಮಾಡ್ವೆ. ಯಾವುದೇ ಕೆಸನ ಗೈಪು, ಪಲ್ಯನೋ, ಪತ್ರೋಡೆನೋ ಮಾಡ್‌ರು ಸ್ವಲ್ಪ ಹುಳಿ ಮಾತ್ರ ಮುಂದೇನೆ ಬೇಕು. ಸ್ವಲ್ಪ ಹುಳಿ ಕಮ್ಮಿ ಆದರೆ ನಾಲಿಗೆ ಕೆರ್ತ ಬಂದದೆ. ಬಿಳಿ ಕೆಸದ ಬೇರ್ನ ಸಹ ಗೈಪು ಮಾಡ್ವೆ. ಮೊಳಕೆ ಕುಡುನೊಟ್ಟಿಗೆ ಹಾಕಿ ಮಾಡ್ದ ಗೈಪು ಬಾರಿ ಲಾಯಿಕ್.

**7. ಬಣ್ಣ ಬಣ್ಣದ ಹೊವ್‌ನ ಗಿಡಗ :** ಬಂದ್‌ಗಳೇ ಇಷ್ಟೊತ್ತು ನೀವು ಕೆಸನ ಎಲೆ, ದಿಂಡ್, ಗೈಪು, ಪಲ್ಯ, ಪತ್ರೋಡೆಂತ ಆತ್. ಇಷ್ಟೇ ಅಲ್ಲ ಬಣ್ಣ ಬಣ್ಣದ ಕೆಸನ ಹೂವ್‌ನ ಗಿಡಗಳ ನೋಡೊಳರೀಯಾ? ನಾನ್ ನೋಡ್ದಂಗೆ ಸುಮಾರ್ 25 ಬಗೆನ ಬಣ್ಣದ ಕೆಸ ಗಿಡಗ ವಳೊ. ಅದರ್ನ್ ಮನೇಗಳ್ಲಿ ಪೊರ್ಲ್‌ಗೆ ಚೆಟ್ಟಿಗಳ್ಲಿ ನೆಟ್ಟ್‌ಕಂಡವೆ. ನನ್ನ ಮನೇಲಿ ಒಂದು ಐದ್ ತರದ ಗಿಡ್‌ಗ ವಳೊ. ಯಾರಾರ್ ಇದರ ನೋಡದೇ ಇದ್ದರೆ ನನ್ನ ಮನೆಗೆ ಬನ್ನಿ. ಗಿಡನ ತಕಂಡ್ ಹೋಕ್.

✍ಕದ್ಯದ ಪಾರ್ವತಿ ಕೃಷ್ಣಪ್ಪ

ಅವಂದೂರು ಗ್ರಾಮ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

(ಹೊಸ ರುಚಿ)

# ಕೋೞಿ ಸುಕ್ಕ

<u>ಮಾಡಿಕೆ ಬೇಕಾದ ಸಾಮಾನುಗ :</u>

ಕೋೞಿಮಾಸ–1 ಕೆ.ಜಿ. ಊರು ಮೆಣ್ಸ್–6, ಕುಂಟೆ–8, ನೀರುೞಿ–1, ಟೊಮೆಟೋ–1, ಕಾಯಿಮೆಣ್ಸ್(ಸಣ್ಣವ್)–2 ಶುಂಠಿ–1 ತುಂಡು, ಬೆಳ್ಳುಳ್ಳಿ–10 ಎಸಳು. ಕೊತ್ತಂಬರಿ–2 ಚಮಚ, ಜೀರಿಗೆ ಅರ್ಧ ಚಮಚ. ಅರಶಿನ ಹೊಡಿ–ಕಾಲು ಚಮಚ, ಗರಂಮಸಾಲೆ–2 ಚಮಚ, ಮೆಂತೆ–10 ಕಾಳು, ಬೇವಿನಸೊಪ್ಪು–8 ಸೊಪ್ಪು, ಕಾಯಿ–1 ಗಡಿ, ಕೊತ್ತಂಬರಿ ಸೊಪ್ಪು, ಹುೞಿ, ಉಪ್ಪು (ರುಚಿಗೆ ಬೇಕಾದಷ್ಟು)

<u>ಮಾಡುವ ಕ್ರಮ :</u>

ಸುರೂಗೆ ಕೋೞಿಮಾಸನ ನೀರ್‌ಲಿ ಲಾಯ್ಕ್ ತೊಳ್ಕೊಣೊಕು. ಆಮೇಲೆ ಒಂದು ಬಾಣಲೆಲಿ ಚೂರು ಎಣ್ಣೆನ ಬಿಸಿಮಾಡಿ 2 ತರ ಮೆಣ್ಸ್, ಕೊತ್ತಂಬರಿ, ಜೀರಿಗೆ, ಮೆಂತೆನ ಹೊರ್‍ಕೊಣೊಕು. ಇದರೊಟ್ಟಿಗೆ ನೀರುಳ್ಳಿ, ಬೆಳ್ಳುಳ್ಳಿ, ಅರಶಿನ ಪುಡಿ, ಹುೞಿ, ಹಂಞ ಹಂಞ ಸೇರ್ಸಿ ನೀರ್ ಹಾಕಿ ಹುೞಿಮೆಣ್ಸ್ (ಮಸಾಲೆ) ಮಾಡಿಕಣೊಕು. ಮತ್ತೆ ಬಾಣಲೆಲಿ ಹಂಞ ಎಣ್ಣೆ ಇಸಿ ಅದು ಕಾಯಕನ ಸಾಸಿವೆ, ಬೇವಿನ ಸೊಪ್ಪು, ಗುದ್ದಿದ ಬೆಳ್ಳುಳ್ಳಿ, ಕೊಯ್ದ ನೀರುಳ್ಳಿ ಮತ್ತು ಟೊಮೆಟೊನ ಹಾಕಿ ಲಾಯ್ಕ್ ಹೊರೆಯೊಕು. ಅದು ಬೆಂದುಕಂಡ್ ಬಾಕನ ಕೋೞಿಮಾಸ ಹಾಕಿ ಲಾಯ್ಕ್ ಮಗ್‌ಚಿ ಹಂಞ ಉಪ್ಪು ಹಾಕಿ ಮುಚ್ಚಿಸೋಕು. ಸುಮಾರು 8–10 ನಿಮಿಷ ಆದ ಮೇಲೆ ಹುೞಿ ಮೆಣ್ಸ್ (ಮಸಾಲೆ) ಸೇರ್ಸಿ ಮಗ್‌ಚೊಕು.

ಇನ್ನೊಂದು ಬಾಣಲೆಲಿ ಹೆರ್‍ದ ಕಾಯಿ ಹೂನ ಹೊರ್‍ಕಂಡು, ಚೂರು ಕೆಂಪಾಕನ ಹಂಞ ಗರುಮಸಾಲೆ ಹೊಡಿ ಹಾಕಣೊಕು. ಲಾಯ್ಕ್ ಹೊರ್‍ದ್ ಬೆಂದ ಮೇಲೆ ಮಾಸದೊಟ್ಟಿಗೆ ಸೇರ್‍ಸೊಕು. ಇೞ್ಸಿದ ಮೇಲೆ ಕೊಯ್ದ ಕೊತ್ತಂಬರಿ ಸೊಪ್ಪುನ ಅದಿಕೆ ಸೇರ್‍ಸೊಕು. ಅಷ್ಟೊತ್ತಿಗೆ ರುಚಿ ಆದ ಕೋೞಿ ಸುಕ್ಕ ಆದೆ. ಇದ್ ಬೊಡ್ರೊಟ್ಟಿ, ನೀರ್‌ದೋಸೆಗೆ ಹೇೞಿಮಾಡ್‌ಸಿದ ಗೈಪು.

✍ಹರ್ಷಿಣಿ ಕೆ.ಎನ್.

ಪ್ರಥಮ ವಾಣಿಜ್ಯ ವಿಭಾಗ
ಶ್ರೀ ಶಾರದ ಪದವಿ ಪೂರ್ವ ಮಹಿಳಾ ಕಾಲೇಜು,
ಸುಳ್ಯ, ದ.ಕ.

ವರದಿ

# ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬ

ನಮ್ಮ ಒಳಗೆ ಇರುವಂತಹ 'ದುರ್ಯೋಧನತನ' ಆಚರಣೆ ಮಾಡಿಕೆ ಅಡ್ಡಿ ಆವುಟು. ಅವನ ಕೆಟ್ಟ ಗುಣಗಳ್ನ ನಮ್ಮಂದ ಹೊರಗಿಸಿರೆ ಮಾತ್ರ ಸಂಪ್ರದಾಯ ಪಾಲ್ಸಿಕೆ ಸಾಧ್ಯತ ಸವಣೂರು ವಿದ್ಯಾರಶ್ಮಿ ವಿದ್ಯಾಲಯದ ಪ್ರಾಂಶುಪಾಲ ಸೀತಾರಾಮ ಕೇವಳನವು ಹೇಳ್ದೊ.

ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ, ಒಕ್ಕಲಿಗ ಗೌಡ ಸೇವಾ ಸಂಘ, ಯುವ ಒಕ್ಕಲಿಗ ಗೌಡ ಸೇವಾ ಸಂಘ, ಒಕ್ಕಲಿಗ ಸ್ವಸಹಾಯ ಟ್ರಸ್ಟ್‌ನ ಸಹಯೋಗಲಿ ಪುತ್ತೂರ್‌ನ ತೆಂಕಿಲ ಒಕ್ಕಲಿಗ ಗೌಡ ಸಮುದಾಯ ಭವನದ ದಶಮಾನೋತ್ಸವದ ಪ್ರಯುಕ್ತ 2018ರ ಆಗಸ್ಟ್ 5 ರಂದ್ ನಡ್ದ ಆಟಿ ಹಬ್ಬದ ಸಭೆಲಿ ಮಾತಾಡ್ದೊ.

ಕಾಲ ಬದಲಾದಂಗೆ ಸಂಪ್ರದಾಯವೂ ಬದಲಾದೆ. ಸಾಂಪ್ರದಾಯಿಕ ರೂಪಂದ ಕೃತಕ ವಸ್ತುಗಳ ಬಳಕೆ ಕಡೆಗೆ ಮನ್ಸ್ ಮಾಡ್ತಾ ಒಳೊ. ಆಟಿ ಸಮೆಲಿ ಆಚರ್ಸುವ ಆಟಿ ಕಳೆಂಜನ ನಾವು ಇಂದ್ ಅದರ ಸುರೂನ ರೂಪಲಿ ನೋಡಿಕೆ ಆಗ್ತಾ ಇಲ್ಲೆ. ರೂಪಾಂತರ ಆದ ಆಟಿ ಕಳೆಂಜಷ್ಟೇ ನಮ್ಮ ಮುಂದೆ ಇರ್ದು. ಇದ್ ಆಟಿ ಕಳೆಂಜಗಷ್ಟೇ ಅಲ್ಲ, ನಮ್ಮ ಸಂಪ್ರದಾಯಗಳೂ ರೂಪಾಂತರ ಆಗ್ತಾ ಉಟ್ಟುತ ಹೇಳ್ದೊ.

ಆಟಿ ತಿಂಗತ್ತೇಳ್ರೆ ಸಂಕಷ್ಟದ ಕಾಲತ ಅರ್ಥ. ಈ ಸಮೆಲಿ ಗಿಡಮೂಲಿಕೆಗಳ್ನ ಅದರ ಮೂಲ ರೂಪಲಿ ಸೇವಿಸೊಕು. ಇದರೊಟ್ಟಿಗೆ ಸಾಕಷ್ಟ್ ಸಂಪ್ರದಾಯಗಳ್ನ ಹಿರಿಯವು ನಮ್ಮ ಮುಂದೆ ಇಸಿಯೊಳೊ. ಅದರ್ನೆಲ್ಲ ನಾವಿಗೆ ಇಂದ್ ಪಾಲ್ಸಿಕೆ ಆಗ್ತಾ ಇಲ್ಲೆ. ಇದಕ್ಕೆ ಕಾರಣ ನಮ್ಮೊಳಗೆ ಇರುವ ಅಹಂ ಮತ್ತೆ ಹೊರ ಜಗತ್ತ್‌ನ ರಂಗ್. ಅದರೆಲ್ಲ ಕರೆಗಿಸಿ ಜೀವನ ಮಾಡಿರೆ, ಸಂಪ್ರದಾಯದ ಮಡ್‌ಲ್‌ಲಿ ಸುಂದರ ಬದ್ಕ್‌ನ ಬದ್ಕಕ್‌ತ ಅವ್ ಹೇಳ್ದೊ.

ಮುಖ್ಯ ನಂಟ್ರಾಗಿ ಬಂದಿದ್ದ ಸಾಮಾಜಿಕ ಅರಣ್ಯ ಇಲಾಖೆನ ವಲಯ ಅರಣ್ಯಾಧಿಕಾರಿ ಪಿ.ಕೆ. ವಿದ್ಯಾರಾಣಿ ಅವ್ ಮಾತಾಡಿ, ಆಧುನೀಕರಣದ ನಿಜವಾದ

ಜೀವನ ಮೌಲ್ಯನ ಕಳ್ಕೊಂಡೊಳೊ. ಸ್ವಾರ್ಥಿಗ ಆದ ನಾವ್ ಪರಿಸರನ ಹಾಳ್ ಮಾಡ್ತೊಳೊ. ಆದರೆ ಆಟಿ ತಿಂಗಲಿ ಮತ್ತೊಮ್ಮೆ ಪ್ರಕೃತಿ ಮತ್ತೆ ಮನುಷ್ಯನ ನಡುನ ಸಂಬಂಧನ ಕೂಡ್ಸುವ ಅವಕಾಶ ಉಟ್ಟು. ಹಿಂದೆ ನಮ್ಮ ಹಿರಿಯವು ಹಾಕಿಕೊಟ್ಟ ಮಾರ್ಗದರ್ಶನಲಿ ನಡೆಕುತ ಕೆಮಿ ಮಾತ್ ಹೇಳ್ದೊ.

ಒಕ್ಕಲಿಗ ಗೌಡ ಸೇವಾ ಸಂಘದ ಅಧ್ಯಕ್ಷ ನಾಗಪ್ಪಗೌಡ ಬೊಮ್ಮೆಟ್ಟಿನವ್ ಮಾತಾಡಿ, ಕರ್ಕಾಟಕ ವೃತ್ತದ ಹತ್ರಂದ ಸೂರ್ಯ ದಾಟಿ ಹೋವ ಕಾಲ ಆಟಿ. ಹಂಗಾಗಿ ಈ ಸಮೆಲಿ ಜಾಸ್ತಿ ಮಳೆ ಮತ್ತೆ ಮಳೆ ಆಕೆ ಕಾರಣತ ಹೇಳ್ದೊ.

ಪ್ರಗತಿಪರ ಕೃಷಿಕರಾದ ಚಂದ್ರಕಲ ಸಿ.ಪಿ. ಜಯರಾಮಗೌಡನವು ಆಟಿ ಹಬ್ಬದ ಸಮಾರಂಭನ ಉದ್ಘಾಟನೆ ಮಾಡ್ದೊ.

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಪಿ.ಸಿ. ಜಯರಾಮ, ರಿಜಿಸ್ಟ್ರಾರ್ ಉಮರಬ್ಬ, ಒಕ್ಕಲಿಗ ಮಹಿಳಾ ಗೌಡ ಸಂಘದ ಅಧ್ಯಕ್ಷೆ ಯಶೋಧ, ಅಕಾಡೆಮಿ ಸದಸ್ಯೆ ತಿರುಮಲೇಶ್ವರಿ ಅವು ಚೆನ್ನಮಣೆ ಆಡುವ ಮೂಲಕ ಬೇರೆ ಬೇರೆ ಸ್ಪರ್ಧಾ ಕಾರ್ಯಕ್ರಮಕ್ಕೆ ಚಾಲನೆ ನೀಡ್ದೊ.

ಸುರೂಲಿ ಮಹಿಳಾ ಗೌಡ ಸಂಘದ ಅಧ್ಯಕ್ಷೆ ಯಶೋದನವ್ ಸ್ವಾಗತಿಸಿದೊ. ಕಡೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸದಸ್ಯ ಚಿದಾನಂದ ಬೈಲಾಡಿಯವ್ ವಂದಿಸಿದೊ.

## ಯಕ್ಷಗಾನ ನಾಟ್ಯ ತರಬೇತಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಂದ ತಾರೀಕ್ 15-09-2018 ರ ಶನಿವಾರದಂದ್ ನಮ್ರತಾ ಕಲಾಮಂದಿರ ಬೆಳ್ಳಾರೆ ಇಲ್ಲಿ ತೆಂಕುತಿಟ್ಟು ಯಕ್ಷಗಾನ ನಾಟ್ಯ ತರಬೇತಿ ಕಾರ್ಯಾಗಾರ ಉದ್ಘಾಟನೆ ಆತ್.

ಶಿಬಿರದ ಸಂಚಾಲಕರಾಗಿ ಲಿಂಗಪ್ಪ ಬೆಳ್ಳಾರೆ ಇವ್ ಮತ್ತೆ ನಾಟ್ಯ ಗುರುಗಳಾಗಿ ಲಕ್ಷ್ಮೀಶ ರೈ ಗುರಿಕ್ಕಾನನವು ಕಾರ್ಯ ನೀಸ್ತಾಬಳೊ.

# ಸರಕಾರಿ ಕಚೇರಿಗಳ್ಲಿ ಅರೆಭಾಷೆ ಮಾತಾಡಿ: ಯು.ಸು. ಗೌಡ

ಅರೆಭಾಷೆ ಎಲ್ಲಾ ಜನಂಗಾದವು ಮಾತಾಡುವ ಭಾಷೆ ಆಕು. ಅದ್ ಜಾಸ್ತಿ ಬಳಕೆಗೆ ಬರೊಕುತ್ತಾದರೆ ಎಲ್ಲಾ ಇಸ್ಕೂಲು ಮತ್ತೆ ಸರಕಾರಿ ಕಚೇರಿಗಳ್ಲಿ ಅನುಷ್ಠಾನಕ್ಕೆ ಬರೊಕುತ್ತೇಳಿ ಬೆಳ್ಳಾರೆ ಜೂನಿಯರ್ ಕಾಲೇಜ್‌ನ ಪ್ರಿನ್ಸಿಪಾಲರಾಗಿರುವ ಯು.ಸು. ಗೌಡನವು ಕರೆ ಕೊಟ್ಟೊ.

ನಾಲ್ಕೂರು ಗ್ರಾಮದ ಹಾಲೆಮಜಲು ವೆಂಕಟೇಶ್ವರ ಸಭಾಂಗಣಲಿ 12–8–18 ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಆಟಿ ಉತ್ಸವ ಸಮಿತಿ ನಾಲ್ಕೂರು, ಲಯನ್ಸ್ ಕ್ಲಬ್ ಗುತ್ತಿಗಾರು, ವಿಜಯ ಗ್ರಾಮಾಭಿವೃದ್ಧಿ ಪ್ರತಿಷ್ಠಾನ ನಾಲ್ಕೂರು, ಆದರ್ಶ ಯೂತ್ ಕ್ಲಬ್ (ರಿ) ಹಾಲೆಮಜಲು, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ಸುಳ್ಯ ಒಕ್ಕೂಟ ನಾಲ್ಕೂರು, ಜವಾಹರ್ ಯುವಕ ಮಂಡಲ (ರಿ) ನಡುಗಲ್ಲು, ತರುಣ ಜ್ಯೋತಿ ಯುವಕ ಮಂಡಲ ಮೆಟ್ಟಿನಡ್ಕ ಇದೆಲ್ಲದರ ಆಶ್ರಯಲಿ ನಡ್ಸಿದ ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ ಕಾರ್ಯಕ್ರಮಲಿ ಯು.ಸು. ಗೌಡನವು ಮಾತಾಡ್ದೊ.

ನಿವೃತ್ತ ಶಿಕ್ಷಕ ಚಿಲ್ತಡ್ಕ ಜತ್ತಪ್ಪನವು ದೀಪ ಬೆಳ್ಗಿಸಿ ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ. ಸಭಾಧ್ಯಕ್ಷತೆನ ಅಕಾಡೆಮಿನ ಅಧ್ಯಕ್ಷ ಪಿ.ಸಿ. ಜಯರಾಮನವು ವಹಿಸಿದ್ದೊ. ಮುಖ್ಯ ನಂಟ್ರಾಗಿ ಗುತ್ತಿಗಾರು ಗ್ರಾಮ ಪಂಚಾಯಿತಿ ಅಧ್ಯಕ್ಷ ಅಚ್ಯುತ ಗುತ್ತಿಗಾರು, ಗೌರವ ಉಪಸ್ಥಿತರಾಗಿ ಶೇಷಪ್ಪಗೌಡ ಹಾಲೆಮಜಲು, ರವೀಂದ್ರ ಕೊರಂಬಟ, ಕುಶಾಲಪ್ಪಗೌಡ ಅಮೆ ಇವು ಭಾಗವಹಿಸಿದ್ದೊ.

ಮಧ್ಯಾಹ್ನದ ಊಟ ಆದಂಗೆ ಬೇರೆ ಬೇರೆ ತರದ ಸಾಂಸ್ಕೃತಿಕ ಕಾರ್ಯಕ್ರಮ ನಡ್ತ್. ಕಡೆಲಿ ರಂಗ ಮಯೂರಿ ಕಲಾ ಶಾಲೆ ಸುಳ್ಯ ಇವರ್‌ಂದ ಲೋಕೇಶ್ ಊರುಬೈಲು ನಿರ್ದೇಶನದ ಅರೆಭಾಷೆ ನಾಟಕ ಮ್ಮಾಯಕದ ಪ್ರದರ್ಶನ ನಡ್ತ್. ವಿಶೇಷ ಆಕರ್ಷಣೆಯಾಗಿ ಡ್ರಾಮಾ ಜೂನಿಯರ್ಸ್‌ನ ತುಷಾರ್‌ಗೌಡ ಭಾಗವಹಿಸಿದ್ದೊ. ಬೇರೆ ಬೇರೆ ಕ್ಷೇತ್ರಲಿ ಸೇವೆಮಾಡ್ದವುಕೆ ಅಂದ್ ಸನ್ಮಾನಿಸಿ ಗೌರವಿಸಿಲಾತ್.

ಮಾಧವ, ದುಗ್ಗಪ್ಪಗೌಡ ಮತ್ತೆ ಶಿವಪ್ರಸಾದ್ ಕಾರ್ಯಕ್ರಮನ ನಿರೂಪಿಸಿದೊ. ಸುರೂಗೆ ಅಕಾಡೆಮಿನ ಸದಸ್ಯೆ ತುಳಸಿ ಮೋಹನ್ ಪ್ರಾರ್ಥಿಸಿದೊ. ಕಾರ್ಯಕ್ರಮದ ಸಂಚಾಲಕರಾಗಿ ಅಕಾಡೆಮಿ ಸದಸ್ಯ ಪರಶುರಾಮ ಚಿಲ್ತಡ್ಕ ಮತ್ತೆ ದಿನೇಶ ಹಾಲೆಮಜನಲುನವ್ ಒಳ್ಳ ರೀತಿಲಿ ಕಾರ್ಯ ನಿರ್ವಹಿಸಿದೊ.

# ಜಲ ಪ್ರಳಯ

2018ರ ಆಗಸ್ಟ್ ತಿಂಗಳ ಮೂರನೇ ವಾರಲಿ ಏನೆಲ್ಲಾ ಆಗಿ ಹೋತು. ನಡೂ ಮಳೆಗಾಲ ಕೊಡಗ್‌ನ ನಡ್‌ಗಿಸಿಬುಡ್ತ್. ಆರಿದ್ರಾ ನಕ್ಷತ್ರದ ಕಡೇ ಪಾದಂದ ಜೋರಾದ ಮಳೆ ಎಡೆಬುಡದೆ ಸೊರ್ತ್. ಪುನರ್ವಸು, ಪುಷ್ಯ, ಮತ್ತೆ ಆಶ್ಲೇಷ ನಕ್ಷತ್ರದ ಮಳೆ ಹುಚ್ಚ್ ಹಿಡ್ದಂಗೆ ಸೊರ್ತ್. ಜನ ಬೆಕ್ಕಸ ಬೆರಗಾದೊ. ಸುಮಾರ್ ಮುನ್ನೂರು ಇಂಚ್‌ನಷ್ಟ್ ಸೊರ್ದ ಮಳೆನ ಭೂಮಿಗೆ ತಡ್ಕಂಬಕಾತ್ಲೆ. ನೋಡಿಕಂಡ್ ಇದ್ದಂಗೆ ಇದ್ದಂಗೆ ಬೆಟ್ಟಗುಡ್ಡ ಸಿಡ್ತ್. ರಣ ನೀರ್ ಉಕ್ಕಿತ್.

ಜನ, ದನಕರ್‌ಗ ಒಕ್ಕಿ ಹೋದೊ. ಮನೆ ಮಾರ್ ಮಣ್ಣಡಿಗೆ ಆತ್. ತೋಟ ತೊಡಿಗೆ ಜಾರಿ ಹೋತು. ಹೆಬ್ಬಂಡೆಗ ಚೆಂಡ್‌ನಂಗೆ ಉರುಂಡಿದೊ. ಹೆಮ್ಮರಗ ಬುಡ ಮೇಲಾದೊ. ಎಲ್ಲಿಯೋ ಇದ್ದ ಮರಗ ಇನ್ನೆಲ್ಲೋ ಸೆಕ್ಕಿಕಂಡೊ. ಸೇತುವೆ ಪೂರ ತುಂಡು ತುಂಡಾಗಿ ಹೋತು. ರಕ್ಕಸ ನೀರ್ ಹರ್ದ್ ಗದ್ದೆಲೆಲ್ಲಾ ಬೆಟ್ಟ ಕುದ್ದತ್, ಹೊಯಿಗೆ ತುಂಬಿತ್. ಸಾವ್ರಾರ್ ಲೋಡ್ ಬಂಡೆಗ, ಮರ ಗಿಡ ತುಂಬಿ ನಿತ್ತ್ ಅದ್ ಯಾವ ಜಾಗೆತ ಗುರ್ತೇ ಸಿಕ್ಕದಂಗೆ ಆತ್. ಬಾಣಂತಿ, ಕೂಸು, ಎಳೆ ಮಕ್ಕ, ವೃದ್ಧರ ಗೋಳುನ ಹೇಳಿಕಾದ್ಲೆ. ಅವರ್ನೂ ಉಳ್ಸೊಕು, ತಾನೂ ಉಳಿಯೊಕು-ಯುವಕರಿಗೆ ಆ ಹೊತ್ತು ಸವಾಲಾಗಿ ಹೋತು. ಹೊಳೆಗೆ ಅಡ್ಡ ಬೆಟ್ಟ ಕುಸ್ದೊತು. ರಸ್ತೆ ತುಂಡಾಗಿ ಹೋತು. ಜನ ಸಂಪರ್ಕ ಇಲ್ಲದಂಗಾತ್. ಕರೆಂಟ್ ಇಲ್ಲದಂಗಾತ್, ದೂರವಾಣಿ ಸಂಪರ್ಕ ಇಲ್ಲದೆ ಎಲ್ಲಿ ಏನಾಗ್ತಾ ಉಟ್ಟುತ ಗೊತ್ತೇ ಆಗದ ಸ್ಥಿತಿ ಬಾತ್. ಜಡಿ ಮಳೆಗೆ, ಹೊಗೆ ಮುಚ್ಚಿಕಂಡ್ ಹತ್ತಡಿ ದೂರಲಿ ಏನಾದರೂ ಕಾಂಬತಿತ್ಲೆ. ಪ್ರಕೃತಿಯ ದಿಗ್ಭಂಧನಲಿ ಜನ ಸಿಕ್ಕಿ ಹಾಕಂಡೊ. ಎಂದೂ ಯಾರೂ ಕಂಡ್ ಕೇಳದ ಮಹಾಪ್ರಳಯಲಿ ಇಪ್ಪತ್ತಕ್ಕೂ ಹೆಚ್ಚ್ ಜನ ಪ್ರಾಣ ಕಳ್ಕಂಡೊ. ಸಾಕು ಪ್ರಾಣಿಗ ಎಷ್ಟೋ ಸತ್ತೋದೊ.

ಉತ್ತರ ಕೊಡಗ್‌ನ ಮಕ್ಕಂದೂರು, ದೇವಸ್ತೂರು, ಕಾಲೂರು, ಹಮ್ಮಿಯಾಲ, ಮುಕ್ಕೊಡ್ಲು, ತಂತಿಪಾಲ, ಗಾಳಿಬೀಡ್, ಕಾಟಕೇರಿ, ಒಂದನೇ ಮತ್ತೆ ಎರಡನೇ ಮೊಣ್ಣಂಗೇರಿ, ಜೋಡುಪಾಲ, ಮದೆನಾಡ್ ಜನರ ಬದ್ಕ್ ಹಾಳಾತ್.

ಕೊಡಗ್‌ನ ಜಿಲ್ಲಾಧಿಕಾರಿ ಪಿ.ಐ. ಶ್ರೀವಿದ್ಯಾನವು ಆ ಸಂದರ್ಭಲಿ ತನ್ನ ಮನೆನಂಗೆ ಊರವರ ಕಾಪಾಡ್ದೊತ್ತೇಳುವ ಮಾತ್‌ಲಿ ಉತ್ಪ್ರೇಕ್ಷೆ ಖಂಡಿತ ಇಲ್ಲೇ ಇಲ್ಲೆ. ಹಂಗೆನೆ ಅವರೊಟ್ಟಿಗೆ ಜಿಲ್ಲಾಡಳಿತ, ಶಾಸಕರ್, ಸರಕಾರ, ಅಧಿಕಾರಿ ವರ್ಗ ಅಲ್ಲದೆ ಭಾರತದ ಸೇನೆ ತುಂಬಾ ಕಾಳಜಿಂದ ಕೆಲ್ಸ ಮಾಡ್ದೊ. ಊರ್‌ನ

ಪರ ಊರ್‌ನ ಬೇರೆ ಬೇರೆ ಸಂಘ ಸಂಸ್ಥೆಗ, ಮತ್ತೆ ವೈಯಕ್ತಿಕವಾಗಿಯೂ ಕೊಡಗ್‌ನ ಜನರ ಸಂಕಟಲಿ ತುಂಬಾ ಸಹಾಯ ಮಾಡ್ದೊ. ಸಹಾಯ ಕೇಂದ್ರ ಆಗಿ ಇಸ್ಕೂಲ್‌ಗಳ ಬುಟ್ಟ್‌ಕೊಟ್ಟೊ, ಸಭಾಂಗಣನ ಬುಟ್ಟ್ ಕೊಟ್ಟೊ. ಅವೆಲ್ಲವ್ಕೆ ಸಂತ್ರಸ್ತರ್ ಋಣಿ ಆಗೋಳೊ.

ಕೊಡಗ್‌ನ ಜನ ಹಳ್ತಾ ಮೇಲೆ ಬಂದಿದ್ದೊ. ಹುಲ್ಲು ಮನೆನ ಬದಲಾಯಿಸಿ ಹಂಚ್‌ನ ಮನೆ ಮಾಡಿಕಂಡಿದ್ದೊ. ಕೆಲವು ಆರ್.ಸಿ.ಸಿ. ಮನೆ ಮಾಡಿ ನೆಲಕ್ಕೆ ಟೈಲ್ಸ್ ಹಾಕಿ ಆಧುನಿಕ ರೀತಿನ ಬದ್ಕ್ ಮಾಡ್ತಿದ್ದೊ. ಮಕ್ಕಳಿಗೆ ಒಳ್ಳೆ ವಿದ್ಯೆ ಕೊಟ್ಟ್‌ಕಂಡ್, ತೋಟ ತೊಡಿಗೆ ಮಾಡಿಕಂಡ್, ಸೊಂತ ವಾಹನಗಳ್ಲಿ ಓಡಾಡಿಕಂಡ್, ದೆವ್ವ ದೇವ್ರಿಗೆ ಕೊಟ್ಟ್‌ಕಂಡ್, ಹಬ್ಬಗಳ್ಲಿ ಒಂದಾಗಿ ಕೂಡಿಕಂಡ್ ಪೊರ್ಲುನ ಜೀವ್ನ ಮಾಡ್ತಿದ್ದೊ.

ಒಳ್ಳೆ ರೇಟ್ ಬರ್‌ಲಿ, ಮತ್ತೆ ಮಾರನೋತ್ತೇಳಿ ಒಳ್ಳೆ ಮೆಣ್ಸ್, ಕಾಫಿನ ಸ್ಟಾಕ್ ಮಡ್ಗಿದ್ದ ಎಷ್ಟೋ ಬೆಳೆಗಾರರ ಆ ಮಾಲೆಲ್ಲಾ ಮಣ್ಣ್‌ಪಾಲಾತ್. ಅತ್ತ ಸಾಲನೂ ತೀರ್‌ತ್ಲೆ, ಇತ್ತ ಮಾಲೂ ಇಲ್ಲೆ. ಅಷ್ಟೇ ಅಲ್ಲ, ಬೆಳೆ ಬೆಳೆತಿದ್ದ ತೋಟನೂ ಇಲ್ಲೆ, ಗದ್ದೆನೂ ಇಲ್ಲೆ. ವಾಸಕ್ಕೆ ಮನೆನೇ ಇಲ್ಲದ ಸ್ಥಿತಿ ಬಂದ್ ಮುಂದೆಕೆ ತಲೆ ಎತ್ತುದು ಹೆಂಗೆತ್ತೇಳುವ ಪ್ರಶ್ನೆ ಜನ್ರ ಮುಂದೆ ಉಟ್ಟು. ಸುಸ್ಥಿತಿಗೆ ಬರೊಕೊರೆ ಕಮ್ಮಿತ್ತೇಳಿರೂ ಇಪ್ಪತ್ತೈದ್-ಮೂವತ್ತು ವರ್ಷಗಳೇ ಬೇಕಾದೆ. ಕೊಡಗು ಇಂದ್ ಬಡತನದ ಜಿಲ್ಲೆ ಆವುಟು.

ವಯೋ ವೃದ್ಧರಂತೂ ನಮ್ಮ ಕಡೇ ಕಾಲಲಿ ಹಿಂಗಾತಲೇತ ಬೇಜಾರ ಮಾಡಿಕಂಡವೆ. ನಡು ವಯಸ್‌ನವ್ ಇನ್ನ್ ಒಂದ್ ಹಂತಕೆ ಬರೊಕೊರೆ ಎಪ್ಪತ್ತೈದರ ವಯಸ್‌ನ ಗಡಿದಾಟಿದ್ದವೆ. ಈಗ ಬದ್ಕ್‌ನ ರೂಪುಸುವ ಹೊಣೆ ಪೂರ ಯುವಕರ ಮೇಲುಟ್ಟು. ಯುವಕರ್ ಆ ಕುಟುಂಬಲಿ ಇದ್ದರೆ! ಯುವಕರೇ ಇಲ್ಲದ ಕುಟುಂಬದ ಸ್ಥಿತಿ?

ಮಕ್ಕಳ ಮಾತ್ರ ಇಸ್ಕೂಲ್ ತಪ್ಪುಸುಬೇಡಿ. ಎಲ್ಲಿಯಾರ್ ಹೆಂಗಾರ್ ಮಾಡಿ ಇಸ್ಕೂಲಿಗೆ ಹೋಗುವ ವ್ಯವಸ್ಥೆ ಮಾಡಿ. ಸರಕಾರ ಆ ನಿಟ್ಟ್‌ಲಿ ಒಳ್ಳೆ ಕೆಲ್ಸ ಮಾಡಿಟು.

ಜಲಪ್ರಳಯ ಆದಂಗೆ ಜಲಕ್ಷಾಮನೂ ಆದು. ಈಗಳೇ ನೀರ್ ಬತ್ತಿಟು. ಪ್ರಕೃತಿ ಸವಾಲು ಒಡ್ಡಿಟು. ಆ ಸವಾಲ್‌ನ ಎದ್ರಿಸಿ ಗೆಲ್ಲುವ ಶಕ್ತಿ ಎಲ್ಲವ್ಕೂ ಬರ್‌ಲಿ. ನಿರಾಶ್ರಿತರಿಗೆ ಆಗುವಷ್ಟ್ ಬೇಗ ಖಾಯಂ ಆಶ್ರಯ ಸಿಕ್ಕಲಿ. ಸಂತ್ರಸ್ತರಿಗೆ ಕೊಡುವ ಪರಿಹಾರಲಿ ಹಳ್ತಾನೂ ತಪ್ಪು ಆಗದಂಗೆ ಎಲ್ಲ ಸಂತ್ರಸ್ತರಿಗೆ ಸೌಲಭ್ಯ ಸಿಕ್ಕುವಂಗೆ ಆಗಿ ಕೊಡಗ್‌ನ ಅಷ್ಟೆ ಅಲ್ಲ, ಸಂತ್ರಸ್ತರಾಗಿರುವ ನೆರೆ ಜಿಲ್ಲೆಗಳ, ನೆರೆ ರಾಜ್ಯಗಳ ಜನ ಬೇಗ ನೆಮ್ಮದಿ ಕಾಣಲಿತ 'ಹಿಂಗಾರ' ಬಯ್ಸಿದೆ.

✍ಬಾರಿಯಂಡ ಜೋಯಪ್ಪ.

# ಅಂದ್



2018 ಜುಲೈ 22 ರ ಆಟಿ ನಾಟಿ ಕೂಡು ಕೂಟದಂದ್ ಆಡ್ಸಿ, ಓಡ್ಸಿ, ಕೊಣ್ಸಿ ಕುಸಿಪಡ್ಸಿದ ದೇವಸ್ತೂರ್‌ನ ಕುಕ್ಕೇರ ಕುಟುಂಬದ ಗದ್ದೆಬೈಲ್ ಅಂದ್.

# ಇಂದ್



ಆಸೆ, ಬದ್ಕ್‌ನೆಲ್ಲಾ ತನ್ನೊಳಗೆ ಹಾಕಂಡ ಅಂದ್‌ನ ಆ ಗದ್ದೆ ಬಯ್ಲ್!
ಕುಕ್ಕೇರ ಶ್ರೀ ಪಳಂಗಪ್ಪ ಮತ್ತೆ ಆ ಕುಟುಂಬಕ್ಕೆ ಅಕಾಡೆಮಿ
ವಿಷಾದ ವ್ಯಕ್ತಪಡಿಸಿದೆ.
ದುರಂತಕ್ಕೀಡಾದ ಜಿಲ್ಲೆ, ಪರ ಜಿಲ್ಲೆ ಮತ್ತೆ ಪರ ರಾಜ್ಯದ ಬಂಧುಗಳೆಲ್ಲವು
ಬೇಗ ಚೇತರಿಸಿಕಣಲಿತ ಅಕಾಡೆಮಿ ಬಯ್ಸಿದೆ.

# ಚಿತ್ರ ಕವನ – "ಪರಿಸರ"



ಪರಿಸರ ಮಾಲಿನ್ಯ ಸುತ್ತಮುತ್ತಲು ಹತ್ತಿ
ಪ್ರಕೃತಿ ದೇವಿಯೆ ಇಲ್ಲಿ ಮುನಿಸಿದಂತಿತ್ತ್
ನಾಗ ಬನ, ಚೌಂಡಿ ಬನ, ದೇವ್ರ ಹೆಸ್‌ರ್ ಹೇಳಿದ್ದ್
ಹಿಂದೆನವು ದಟ್ಟ ಕಾನನನೇ ಬೆಳ್ಸಿದ್ದೊ.

ನಮ್ಮೂರ ಸೇತುವೆಲಿ ಹೊಂಡ ಗುಂಡಿಗಳಾಗಿ
ಮಳೆ ನೀರ್ ನಿಂತಿತ್ತ್ ಕೆರೆಗಳಾಗಿ
ಸೇತ್ವೆ ಗುಂಡಿಯ ನೀರ್ಲಿ ಬಾನ ಮೋಡದ ಬಿಂಬ
ಓಡುದರ ಕಂಡವಂಗೆ ಬಾತ್ ಜಂಭ

ಮೋಡ ಓಡ್ವರ ಕಂಡ್ ಅದಕ್ಕಿಂತ ಜೋರಾಗಿ
ಕಾರ್ ಓಡ್ಸಿದ್ ಬೀತ್ ಗುಂಡಿಗೋಗಿ
ಏನೇ ಮಾಡಿರು ಕಾರ್ ಮೇಲೆದ್ದ್ ಬಾತ್‌ಲೆ
ಸಹಕರಿಸೊವು ಯಾರೂ ಕಾಂಬೊದುಲ್ಲೆ

ಸೇತುವೆನ ಕೈತಾಂಗ್ ತಡೆಗೋಡೆ ಬಿದ್ದುಟು
ಜಲಕನ್ಯೆ ಕೈ ಹಿಡ್‌ದ್ ಕರ್ದಾಂಗುಟ್ಟು
ಇನಿಧನಿಯ ನೀರ್‌ಸದ್ದ್ ತಾಳ ಘಂಟೆ
ಇಣಿಕಿದ್ ನೋಡಿರೆ ಯಮನ ಕರೆ ಘಂಟೆ

ಸಿರಿ–ಧನಿಕನಾಗಿರ್ಲಿ, ದೊಡ್ಡ ಹುದ್ದೆಯಲೇ ಇರ್ಲಿ
ವಿದ್ಯೆ–ಬುದ್ಧಿಯ ಜೊತೆಗೆ ಸಂಸ್ಕಾರ ಇರ್ಲಿ
ಜೀವನಲಿ ನೈತಿಕತೆ, ಬೌದ್ಧಿಕತೆ ಸಂಸ್ಕಾರ
ಇದ್ದರೆನೆ ಸಂಸಾರ ಬಾಳ್ ಬಂಗಾರ

✍ಮೂಲೆ ಮಜಲು ದೇವಯ್ಯ ಚಿನ್ನಪ್ಪ

ಕಾರ್ಲೆಗ್ರೂಪ್
#151, ಇಂಡಸ್ಟ್ರಿಯಲ್ ಸಬರ್ಬ್, ಯಶವಂತಪುರ,
ಬೆಂಗಳೂರು – 560 022. ಮೊ : 9008989012.

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊಡ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.

## ಕಣ್ತಪ್ಪು

**ನೀವೂ ಒಡ್ಸಿ : ಹಿಂಗೆ ಓದಿಕಣಿ–ಸಂಚಿಕೆ 6 ರ 72ನೇ ಪುಟ.**

2. ಮರದ ಕಾಲ್‌ನ ಗೂಡೆಗೆ ಕರಿಮ್ಮೆ ಉಟ್ಟು, ಬೆಳ್ಳಿ ಕಡಗ ಹಾಕಿಟು, ರೊಯ್ಯಂತ ಇಳ್ದದೆ ಸರ್ರಂತ ಮೇಲೆ ಹೋದೆ – **ಒನಕೆ**
3. ವಾರೆ ಕೋರೆನ ಗಳೆ, ಕಚ್ಚಿದವರ ಬಾಯಿಗೆ ಉಚ್ಚೆ ಹೊಯ್ದದೆ – **ಕಬ್ಬು**
4. ಓಲಗ ಕಾಣದ ಚಪ್ಪರ, ಕರಿಮಣಿ ಸರ ಮುದ್ದೆ ಮಾಡ್ದಂಗೆ ಚಪ್ಪರಲಿ ನೇತಾಡ್ದೆ – **ದ್ರಾಕ್ಷಿ**

## 2. ಗಾದೆಗ (ಹಿಂದೆನ ಸಂಚಿಕೆಂದ)

83. ಅತ್ತೆಗೆ ತಕ್ಕ ಸೊಸೆ.
84. ಗಂಡನ ತಾಳಕ್ಕೆ ಹೆಂಣ್‌ನ ಮೇಳ.
85. ತಾಯಂತ ಮಕ್ಕ, ನಾಯಂತ ಬಾಲ.
86. ರೋಗಿ ಬಯಸಿದ್ದ್ ಹಾಲನ್ನ ವೈದ್ಯ ಹೇಳಿದ್ದ್ ಹಾಲನ್ನ.
87. ಮೊನ್‌ಕಂಡ ಕೊತ್ತಿನಂಗೆ.
88. ಒಲೆ ಕೋಳಿ ಒಕ್ಕಿದೆ.
89. ಎತ್ತ್‌ನ ಬೇನೆಗೆ ಕೋಣಕ್ಕೆ ಬರೆಹಾಕಿತ್.
90. ಇಬ್ಬರ ಮನಸ್ಸ್ ಘುಳ್ಳುಹುಳ್ಳಂಗೆ.
91. ರಾಯರ ಕುದುರೆ ಕತ್ತೆ ಆದಂಗೆ.
92. ಕಾಂಬಕನ ಬಾರದ ಸಿಟ್ಟ್ ಉಂಬಕನ ಬಾತ್.
93. ಬೇರೊಬ್ಬನ ಕೋಪಲಿ ಮೈಯೆಲ್ಲ ಪರ್ಚಿಂಕಾತ್.
94. ಮೀಸೆ ಕೀಳ್‌ಕನ ಬಾರದ ಸಿಟ್ಟ್ ರೋಮ ಕೀಳ್ಕನ ಬಾತ್.
95. ಕರ್ಜೂರ ಹಣ್ಣಾಕನ ಕಕ್ಕೆ ಬಾಯಿ ಹುಣ್ಣಾದಂಗೆ.
96. ಕುರ್ಡಂಗೆ ಸೂಟೆ ಕೊಟ್ಟಾಂಗೆ.
97. ಕಿವುಡನ ಕೈಲಿ ಕಿನ್ನರಿ ಕೊಟ್ಟಂಗೆ.
98. ಕೋಣನ ಮುಂದೆ ಕಿನ್ನರಿ ಬಾರ್ಸಿದಂಗೆ.
99. ಲೆಕ್ಕಕ್ಕುಟ್ಟು ಅಳ್ತೆಗಿಲ್ಲೆ.
100. ಕಡ್ಡವೆಗೆ ಕಾಲ್ ಬೊಚ್ಚಿಕನ ನಾಯಿಗೆ ಉಚ್ಚೆ ಬಾತ್.
101. ಕೆಲ್ಸಕ್ಕೆ ಕಳ್ಳ ತಿಂಬಕೆ ಮಳ್ಳ.
102. ಕಾಸಿಲ್ಲದಂವ ದೋಣಿಗೆ ಮುಂದೆ ಕಾಲ್ ಹಾಕೊಕು.
103. ದೀಪಕ್ಕೆ ಹಾಕಿದ ಎಣ್ಣೆ ಆರ್‌ಕನ ಮುಟ್ಟ.
104. ಪಾಪದ ಕೊಡಪ್ಪಾಣ ತುಂಬೊಕು.
105. ಹೊಟ್ಟೆ ತುಂಬಿದವಂಗೆ ಯಾವ ಇಚ್ಚೆ ಉಟ್ಟು.
106. ಕುದ್ಕನ ಬೇಟೆ ಆಕನೇ ಗೊತ್ತು.
107. ಇರ್‌ಕನ ರಾಜ ಕೈತಪ್ಪುಕನ ಕುರೆ.
108. ಬೋಪನ ಕಥೆಲಿ ಅಪ್ಪಂಗೆ ಕಷ್ಟಾತ್.
109. ನಂಜೆಳಂಗೆ ಮೊಟ್ಟೆಲಿ ಕಿಚ್ಚಿ.
110. ಸುಟ್ಟ್‌ತಿಂಬಕೆ ಗೇಣ್ ಉದ್ದ ಗೆಣಸ್ ಇಲ್ಲೆ.



6

111. ಆಳವಂಗೆ ಆರ್‌ಕಣ್ಣ್ ಮೂಳವಂಗೆ ಮೂರ್‌ಕಣ್ಣ್.
112. ಬರ್ದ್ದ ತಿಂದವನ ಗುಟ್ಟು ಹುಕ್ಕ್ ನೋಡ್ಕನೇ ಗೊತ್ತು.
113. ಬೇಲಿಯೇ ಹೊಲ ಮೇದಂಗೆ.
114. ನೊಗ ಜಾರ್‌ಕನ ಜತ್ತೆ ಬಿಚ್ಚಿದಂಗೆ.
115. ಕಾಡ್‌ಲಿ ಕಾಡ್‌ಕೋಳಿ ಇದ್ದಂಗೆ.
116. ಕಪ್ಪೆಗಳ ಹೆಕ್ಕಿ ಹುಡ್ಕೆಗೆ ಹಾಕಿದಂಗೆ.
117. ಪಿತ್ತಾಳೆ ಇದ್ದ ಹಾಂಗೆ.
118. ಹೋದೆ ಅಲ್ಲಿ ಗುಂಡಾದ ಹಂದಿನಂಗೆ.
119. ಮಾತಿನ ಮಲ್ಲ ಸೂಜಿತೂರಿಕೆ ಸೆರೆ ಇಲ್ಲೆ.
120. ಹಾವು ಮುಂಗ್ಸಿ ಇದ್ದಂಗೆ.
121. ಎಣ್ಣೆ ಸೀಗೆ ಇದ್ದಂಗೆ.
122. ಕತ್ತಲೆ ಬೊಳ್ಪು ಇದ್ದಂಗೆ.
123. ಕಳ್ಳಕೋಳಿ ಮೆಟ್ಟಿದಂಗೆ.
124. ದಾರಿಹೋಕಂಗೆ ಕೊಪ್ಪರಿಗೆ ಸಿಕ್ಕಿದಂಗೆ.
125. ಬೆಳ್ಳಾರೆ ಮಾಣಿಕ ಕೂಂಗಿದಂಗೆ.
126. ಕಂದಡಿನ ಸುಡೊಕು ಹೆಬ್ಬಾವುನ ಹೂಳೊಕು.
127. ಕಡ್ಲೆ ಉಟ್ಟು ಹಲ್ಲ್ ಇಲ್ಲೆ.
128. ಮೊಣ್ಣಾಕನಗುರಾದುಲೆ ಉಗುರಾಕನ ಮೊಣ್ಣಾದುಲೆ.
129. ಗೊಗ್ಗರೆ ಹಲ್ಲ್‌ನಂವ ಸತ್ತರೂ ಗೊತ್ತಿಲ್ಲೆ.
130. ಕೊಮ್ಮೆ ಹೊಟ್ಟೆವನ ಹಸಿವು ಗೊತ್ತಿಲ್ಲೆ.
131. ಉಪ್ಪು ತಿಂದವ ನೀರ್ ಕುಡಿಯೊಕು.
132. ಬಂಟ ತೆಳಿಕುಡ್ದಂಗೆ.
133. ಸೆಟ್ಟಿ ಹಳ್ಳಲಿ ಹೋದಂಗೆ.
134. ಮದ್ದಾನೆ ನಡ್ದಂಗೆ
135. ತೆಕ್ಕಟೆಗೆ ಉರುಳ್ ಇಸಿದಂಗೆ
136. ಗಾಣಿಗನ ಒರ್ಲ್‌ಲಿ ಎಣ್ಣೆ ಬಂದಾಂಗೆ.
137. ಹುಲಿಗೆ ಹುಣ್ಣಾದಂಗೆ.
138. ಊರಿಡಿ ಸುತ್ತಿ ಬೊರಿ ಕೈಲಿ ಬಾತ್.
139. ಕುದ್ಕನ ಮೋರೆ ಕಂಡುಟು.
140. ಊಟಕ್ಕಿಲ್ಲದ ಉಪ್ಪಿನಕ್ಕಾ

141. ಹೇಂಟೆ ಕೂಂಗಿ ಹುಂಜನ ತಲೆ ತೆಗ್ದಾಂಗೆ.
142. ನಾಯಿ ತಿಂದ್ ನರಕಕ್ಕೆ ಹೋದಂಗೆ.
143. ಬೆಂಡೆಕ್ಯಾ ತೋರಾಕನ ಹೋರಿ ಹುಂಗಾರ್ದೆ.
144. ರೊಟ್ಟಿ ಮೇಲೆ ತುಪ್ಪ ಬಿದ್ದಾಂಗೆ.
145. ಕಂಚಿನ ಕಡ್ಲೆ ಅಗ್ದಂಗೆ.
146. ಕೊಂಕಣಿ ಎಮ್ಮೆಗೆ ಕೊದಂಟಿ ಮೊದ್ದು.
147. ಅಲ್ಪನ ಸಂಗ ಅಭಿಮಾನ ಭಂಗ.
148. ಬರಬಂದ ಕಾಲಕ್ಕೆ ಮಂಜ ಊಟಕ್ಕೆ ಕಲ್ತತ್.
149. ಹೂಟೆಲಿ ಶೂರ ಬೇಟೆಲಿ ಧೀರ.
150. ಅಣ್ಣ ಕೋಟೆಗೆ ತಮ್ಮ ಕೈ ಚೀಲಕ್ಕೆ.
151. ಕುಡ್ದುಟ್ಟು ಕಾಫಿ ಏರಿಟು ಮತ್ತ್.
152. ಬರಿಂಕನ ಬೇಟೆಲಿ ಬಣ್ಣದ ಹಂದಿಮರಿ.
153. ಹಿಡ್ದುಟು ದೆವ್ವ ಹೊಡ್ದುಟು ಮಾರಿ.
154. ಅಡ್ಕಲಿ ಅಡ್ಗಿಟು ಇದಿರಂಟಿ ಹಕ್ಕಿನಂಗೆ.
155. ಮಾಳಿ ತೆಗೆಕೆ ಅಣ್ಕ್ ಮಲ್ಗಿಕೆ ಮುಳ್ಳುಹಂದಿ.
156. ತೇಪ ಹಾಕಿಟು ಯಾಗ ಬುಟ್ಟದೆಂತ ಗೊತ್ತಿಲೆ.
157. ಹಿಡ್ದುಟು ಕುರೆ ಹಿಡ್ದಂಗೆ.
158. ಬೆನ್ನಿಗೆ ಕಟ್ಟಿಕ ಹಾಳೆ ಬೀಳ್ದು ಬೇಕಾದಂಗೆ.
159. ಭಂಗಿ ಕುಡ್ದವನ ಭಂಗನೋಡು ಕಳ್ಳ್ ಕುಡ್ದವನ ಸಿರ್ಕ ನೋಡು.
160. ಬೊಗುಳುವ ನಾಯಿ ಕಚ್ಚಿಕ್ಕಿಲ್ಲೆ.
161. ಕುಂಬಾರಂಗೆ ವರ್ಷ ದೊಣ್ಣೆಗೆ ನಿಮಿಷ.
162. ಇಂಗ್ ತಿಂದ ಮಂಗನ ಹಾಂಗೆ.
163. ಹಕ್ಕಿಗೆ ರೆಂಕೆ ಬಲ ಬಾವಂಗೆ ನೆಂಟ ಬಲ.
164. ಹೆಗ್‌ಲಿಗೆ ಹೆಗ್‌ಲ್ ಕೊಟ್ಟುಟು

✍'ಮಾಲಾಗೌ'

ಎಂ. ಲಕ್ಷ್ಮಣ ಗೌಡ
ಮಾಯಿಪನ ಮನೆ,
ಮಡಪ್ಪಾಡಿ ಗ್ರಾಮ ಮತ್ತು ಅಂಚೆ,
ಸುಳ್ಯ ತಾಲೂಕು, ದ.ಕ.
ಮೊ : 9483923310

# ಪದ – ಪದಾರ್ಥಗ

1. **ಅಂಗಿ :** ಸಂಸ್ಕೃತದ 'ಅಂಗಿನ್' ಎಂಬ ಪದಕ್ಕೆ ಅಂಗಗಳ್‌ಂದ ಕೂಡ್‌ದ, ಅವಯವಗಳ್‌ಂದ ಕೂಡ್‌ದ, ಮುಖ್ಯವಾದ ತ ಅರ್ಥವುಟ್ಟು. ಅಂಗಾನಿ ಅಸ್ಯ ಸಂತಿ ಎಂಬ ಅರ್ಥಲಿ ಅಂಗ ಶಬ್ದಕ್ಕೆ ಇನಿಃ ತೇಳುವ ಪ್ರತ್ಯಯ ಸೇರ್‌ದೆ. ಇದಿಕ್ಕೆ ಅಂಗ ಇರುದು ತೇಳುವ ಅರ್ಥ. ಅಂಗಿನ್ ಶಬ್ದ ಕನ್ನಡಲಿ ಅಂಗಿ ಆದೆ. ಅರೆಬಾಸೆಲು ಅಂಗಿತೇಳುವ ಪದನ ಬಳ್‌ಸುವೆ. ಆಗ ಅದಿಕೆ ಮೈಗೆ ಧರ್‌ಸುವ ಉಡುಪು, ಕವಚತೇಳುವ ಅರ್ಥ ಬಂದದೆ.

ಒಂದು ಗಾದೆ ಉಟ್ಟು – 'ಅಂಗಿಕೊಟ್ಟು ಭಂಗಿ ಸೇದಿ ಮಂಗನಾತ್'. ಭಂಗಿನ ಮೇಲಿನ ಆಸೆಂದ ತಾನು ಹಾಕಂಡಿದ್ದ ಅಂಗಿನ ಕೊಟ್ಟು ಅದಿಕೆ ಬದಲಾಗಿ ಭಂಗಿನ ತಗಂಡ್ ಸೇದಿತ್‌ಗಡ. ಆಮೇಲೆ ಬೆತ್ತಲೆ ಓಡಾಡಕಾತ್‌ಗಡ. ಅವ ಮಂಗನಲ್ಲದೆ ಬೇರೇನ್? ಅಂಗಿ ಶಬ್ದನ ಬೇರೆ ಶಬ್ದಗಳೊಟ್ಟಿಗೂ ಸೇರ್‌ಸಕ್. ಆಗ ಬಗಲಂಗಿ, ನಿಲುವಂಗಿ, ದೊಡ್ಡಂಗಿ, ಗಿಡ್ಡಂಗಿ ಹಿಂಗೆ ಶಬ್ದಗಳಾದೆ.

2. **ಅಂಜುಬುರುಕ:** ಕನ್ನಡಲಿ 'ಪುರುಕ' ತೇಳುದು ಒಂದು ವ್ಯಕ್ತಿವಾಚನ ಪ್ರತ್ಯಯ. ವಿಶಿಷ್ಟ ಸ್ವಭಾವನ ಹೇಳ್‌ಕನ ಈ ಪ್ರತ್ಯಯನ ಸೇರ್‌ಸೊಕು. ಅಂಜು=ಹೆದರ್ ಹೆದರುವ (ಅಂಜುವ) ಸ್ವಭಾವದಂವ ಅಂಜು ಬುರುಕ. ಅಂಜು+ಪುರುಕ=ಅಂಜುಬುರುಕ. ಸಮಾಸಲಿ 'ಪ' ಕಾರ 'ಬ' ಕಾರ ಆಗುಟು. ಅರೆಬಾಸೆಲಿ ಅಂಜುಬುರುಕನ ಹೆದರ್ ಪುಕ್ಲತನು ಹೇಳುವೆ. ಪುಕ್ಕಲ್ ಸ್ವಭಾವತೇಳ್‌ರೆ ಹೆದರುವ ಗುಣದವತ ಬಳ್‌ಸುವೆ. ಇನ್ನ್ ಅಳುಬುರುಕ ತೇಳ್‌ರೆ ಮರ್‌ಡುವ ಸ್ವಭಾವದಂವ, ಹೀಂಗೆನೆ ಲಂಚಬುರುಕ, ಸುಳ್ಳುಬುರುಕ, ಚಾಡಿಬುರುಕತ ಶಬ್ದಗಳ್‌ನ ಮಾಡಿರೆ ಸ ತಪ್ಪಾದುಲ್ಲೆ. ಇವೆಲ್ಲ, ಈಗ ಮಾಮೂಲಿ ಪ್ರಚಾರಕ್ಕೆ ಬರುತ್ತಿರುವ ಪದಗ.

3. **ಅಂತಸ್ತು :** ಕನ್ನಡಲಿ ಪ್ರಚಾರಲಿರುವ ಈ ಶಬ್ದನ ಮೂಲ ನಿಶ್ಚಯ ಆತ್‌ಲ್ಲೆ. ಸಂಸ್ಕೃತದ ಅಂತಃಸ್ಥ ತೇಳುವ ಶಬ್ದನ ಕೆಲವು ನಿರ್ದೇಶಿಸುವೆ. ಅಂತಃಸ್ಥ, ಅಂತಸ್ಥಿತ ಎಂಬ ಪದಗಳಿಗೆ ನಡುಲಿ ಸೇರ್‌ಸಿದ, ಒಳಗ್‌ನ, ಒಳಗಿರುವತೇಳುವ ಅರ್ಥಉಟ್ಟು. ಆದ್ದರ್‌ಂದ ಅಂತಸ್ತು ತದ್ಭವ ಆಗಿರುದು. ಕನ್ನಡಲಿ ಅಂತಸ್ತು ಪದಕ್ಕೆ ಒಂದರ ಮೇಲೆ ಒಂದ್ ಸೇರ್‌ಸುದು, ಮಹಡಿ, ಉಪ್ಪರಿಗೆ, ದರ್ಜೆ, ಮಟ್ಟತೇಳುವ ಅರ್ಥ ಉಟ್ಟು. ಅರೆಬಾಸೆಲಿ ಮಾಳಿಗೆ, ಮಾಡಿ ತೇಳುವ ಪದನ ಬಳ್‌ಸುವೆ.

**ಡಾ। ಕೋರನ ಸರಸ್ವತಿ ಪ್ರಕಾಶ್**
ಆಧಾರ
✍ಜಿ. ವೆಂಕಟಸುಬ್ಬಯ್ಯ–ಇಗೋ ಕನ್ನಡ.



ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬಲಿ ಕುಪ್ಪಿಗೆ ನೀರ್ ತುಂಬುಸುವ ಸರ್ಧೆ




ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬಲಿ ನಡ್ದ ಸಾಂಸ್ಕೃತಿಕ ಕಾರ್ಯಕ್ರಮ



12-8-18 ರಂದ್ ಸುಳ್ಯದ ನಾಲ್ಕೂರು ಗ್ರಾಮದ ಹಾಲೆಮಜಲುಲಿ ನಡ್ದ'ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ'ದ ವೇದಿಕೆಲಿ ಗಣ್ಯರ್



12-8-18 ರಂದ್ ಸುಳ್ಯದ ನಾಲ್ಕೂರು ಗ್ರಾಮದ ಹಾಲೆಮಜಲುಲಿ ನಡ್ದ'ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ'
'ಮಾಯಕ' ನಾಟಕದ ಕಲಾವಿದರೊಟ್ಟಿಗೆ ಅಕಾಡೆಮಿನ ಅಧ್ಯಕ್ಷರ್ ಮತ್ತೆ ಸದಸ್ಯರ್




'ಹಿಂಗಾರ' ಸಂಚಿಕೆ ಆರರ ಅನಾವರಣ

HINGARA Arebhashe Quarterly Volume -2, Issue -7

ate: 30.09.2018 Kodagu KARARB/2016/69571 Price : 20/- Pages : 84




5-8-2018 ರಂದ್ ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬದ ಉದ್ಘಾಟನೆ



ಪುತ್ತೂರ್‌ನ ತೆಂಕಿಲಲಿ ನಡ್ದ ಆಟಿ ಹಬ್ಬಲಿ ಚೆನ್ನಮಣೆ ಆಟದ ಉದ್ಘಾಟನೆ


Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

Ptd@Sri Krishna Printers. 94481 35592


# ಹಿಂಗಾರ

ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ


ಸಂಪುಟ-2 ಸಂಚಿಕೆ-7 ದಿನಾಂಕ : 30.09.2018 ಕೊಡಗು ರೂ. 20/-


